ಶಾರದಾ ಸಾಹಿತ್ಯ ಮಾಲೆ–೩೩

# ಮದುವೆ ಮಾಡಿ ನೋಡು

ಎಂಟು ‘ಜಿಬಿಜ್’ ಬರಹಗಳು

ಲೇಖಕರು :
‘ ಜಿಬಿಜ್ ’

ಶಾರದಾ ಪ್ರಕಟನಾಲಯ
ಆರಳೇಪೇಟೆ, ಬೆಂಗಳೂರು ೨

ಮುದ್ರಣ:
**ಚಿತ್ರಾ ಪ್ರಿಂಟರಿ,**
ಬೆಂಗಳೂರು-೨

ರಕ್ಷಾಪತ್ರದ ರಚನೆ:
**ಆರ್. ಎಸ್. ನಾಯ್ಡು**

ಪ್ರಥಮ ಮುದ್ರಣ:
**ಡಿಸೆಂಬರ್ ೧೯೫೪**


ಬೆಲೆ:
**ಒಂದು ರೂಪಾಯಿ**

'ಮಾಲೆ'ಯ
ವಾರ್ಷಿಕ ಚಂದಾ
ಏಳೂವರೆ ರೂಪಾಯಿ
(ಅಂಚೆವೆಚ್ಚ ಸೇರಿ)

# ಪರಿಚಯ

ಜಿಬಿಜ್ ನಗೆಬರೆಹಗಳನ್ನು ಪ್ರಕಟಿಸುತ್ತಿದ್ದಾರೆ ಅಂತ ಯಾರೋ ಹೇಳಿದರು. ಜಿಬಿಜ್ ಅಂದರೆ ನನಗೆ ತುಂಬ ಪರಿಚಯ. ನಿಮಗೇನೋ–ತಿಳಿಯೆ. 'ಹುಡುಗಾಟ'ವಾಡುತಿದ್ದಾಗಲೇ ನಾನು ನೋಡಿದ್ದೆ. ನೀವೂ ನೋಡಿರಬಹುದು ಅವರಿದ್ದ ಕಡೆ–ಆದರೆ ಅವರು ನಿಮ್ಮ ಕಣ್ಣಿಗೆ ಬಿದ್ದಿರಲಾರರು. ನಾಲ್ಕಡಿ ಎತ್ತರದ ೬೪ ಪೌಂಡು ತೂಕದ ಆಳು ಆತ. ಹಾಗೇನಾದರೂ ಕಣ್ಣಿಗೆ ಬಿದ್ದರೂ 'ಯಾರೋ ಹುಡುಗ' ಅಂತ ನೀವೂ ಅಷ್ಟಾಗಿ ಅವರನ್ನು ಗಮನಿಸಿರಲಾರಿರಿ.

ಈಗ "ಜಿಬಿಜ್ ನಗೆಬರೆಹ ಬರೆದಿದ್ದಾನೆ" ಅಂದಾಗ ನನಗೆ ತುಂಬ ಬೇಸರವಾಯಿತು. ನಮ್ಮಲ್ಲಿ ಅನೇಕರು ಆ ಕೆಲಸ ಮಾಡುತ್ತಿದ್ದಾರೆ; ನಗೆಬರೆಹ ಬರೆದು ಇದು ಗಂಭೀರ ಬರೆಹ ಎಂದು ಹೇಳುತ್ತ, ಆ ಮಾತಿನ ತೂಕ ಹೆಚ್ಚಿಸಲು ಗಂಭೀರವಾಗಿ ಅಭಿನಯಿಸುತ್ತಾರೆ. ನಮ್ಮ ಮುಂದಿರುವ ಗಂಭೀರ, ತೀಕ್ಷ್ಣ ಲೇಖನಗಳೂ ಕತೆಗಳೂ ಸಾಮಾನ್ಯವಾಗಿ ನಗೆಬರೆಹಗಳೇ. ನಮ್ಮಲ್ಲಿ ಕೆಲವರು ದುಃಖ ದುರಂತ ಬಡತನ ಹಸಿವು ರೋಗಗಳ ಬಗೆಗೂ ಕತೆ ಕವನ ಬರೆದಿದ್ದಾರೆ. ಅವುಗಳನ್ನು ಓದಿ ಅನೇಕರು ಅದು ನಗೆಬರೆಹ ಎಂಬಂತೆ ವರ್ತಿಸಿದ್ದಾರೆ.

ಆದುದರಿಂದ ಜಿಬಿಜ್ ಬರೆದ ಬರೆಹ ಎಂಥ ಜಾತಿಗೆ ಸೇರಿದೆ ಅನ್ನೋದನ್ನು ನಾನೇ ಪರೀಕ್ಷಿಸಲು ಹೊರಟೆ.

ಜಿಬಿಜ್ ವಿಚಾರ ಅರಿತವರೆಲ್ಲ ಹೀಗೇ ಮಾಡಬೇಕಾದೀತು.

ಯಾಕೆ–ಗೊತ್ತೇ?

ಅದೊಂದು ವಿಚಿತ್ರ 'ಪ್ರಾಣಿ'.

ಅರ್ಥಾತ್ ಅವರಿಗೆ 'ಪ್ರಾಣ' ಇದೆ!

ಮನೆಯಲ್ಲಿ ಚೆನ್ನಾಗಿ ಬೆಳೆದ ಈ ಜಿಬಿಜ್ ಎಂಬ ಹುಡುಗನಿಗೆ, ಹಳೆಯ ಸಂಪ್ರದಾಯ ಸಂಸ್ಕೃತಿಗಳಿಗೆ ಹೊಂದಿಕೊಂಡ ಹಿರಿಯರು 'ತಪ' ಕಲಿಸ ಲೆಳಸಿದರು. 'ತಪ'ದ ಬಗೆಗೆ ಹೇಳಿದರು. ಆದರೆ, ಆತ ಅದನ್ನು 'ತಾಪ' ಅಂತಲೇ ಉಚ್ಚರಿಸಿ, ತಾಪ ಹೊಂದಿದ. ತಪಸಿಯಾಗಲಿ ಎಂದು ಹಿರಿಯರು ಬಯಸಿದರೆ, ತಾಪದ ಪರಿಣಾಮವಾಗಿ ಆತ ಮದುವೆಮಾಡಿಕೊಂಡು, ತಾಪ

ತ್ರಯ ಹುಟ್ಟಿಸಿಕೊಂಡ. ಈಗ ಆತನಿಗೆ ಹೆಂಡತಿ, ಇಬ್ಬರು ಮಕ್ಕಳು ಇದ್ದಾರೆ; ತಾಪತ್ರಯ ಪೂರ್ಣವಾಗಿದೆ. ಆದುದರಿಂದ ಅವನೆಂದರೆ ನಮಗೆಲ್ಲ ನಗೆ'ಬರೆಹ'.

ಈಗ ಅವನ 'ಬರೆಹ' (ಹಣೆಬರೆಹವಲ್ಲ) ಹೇಗಿದೆ ಎಂದು ನೋಡಲು ಪ್ರೆಸ್‌ಗೇ ಹೋದೆ. ಕಂಪಾಜಿಟರನ್ನೇ ಕೇಳಿದೆ.

"ಅದೇನೂ ಹರಟೆ ಅಲ್ಲ ಸಾರ್, ಅದಕ್ಕಿಂತ ಕೊಂಚ ಚೆನ್ನಾಗಿದೆ"

"ಅಂದರೆ–ಕಥೆ ಏನಯ್ಯಾ? "

"ಕಥೆ.... ಹ್ನೂ.... ಅಲ್ಲ ಸಾರ್.... ಕಥೆಯ ಹಾಗೆ ಭಯಂಕರ.... ಭೀಕರ ... ಹತ್ಯೇ.... ಇತ್ಯಾದಿ ಇಲ್ಲ ಸಾರ್"

"ಕವಿತೆಯೇನಯ್ಯ ? "

"ಹ್ನೂ.... ಹೌದು. ಆ ಮೊನ್ನೆ ಯಾವುದೋ ಪತ್ರಿಕೆಯಲ್ಲಿ ನೋಡಿದೆ ಸಾರ್... ಹಾಡಲು ಬರುವುದಿಲ್ಲ.... ಗದ್ಯ ಅಲ್ಲ.... ಹರಟೆ–ಅಲ್ಲ ಹಾಗಿತ್ತು.... ಹಾಗೇ ಇದೆ ಸಾರ್ ಇದೂ."

"ಅದೆಂಥ ಸಾಹಿತ್ಯವಯ್ಯ. ನೀ ಹೇಳೋದು ನೋಡಿದರೆ, ಇದು ಕವಿತೆಯೂ ಅಲ್ಲ ..."

"ಹಾಗಾದರೆ.... ಸರಿ.... ಸಾರ್.... ಅಲ್ಲ."

"ಮತ್ತೇನಯ್ಯ.... ಕಾದಂಬರಿಯೋ ? "

"ಅಂದರೆ ... ಉದ್ದಕ್ಕೂ ಒಂದೇ ಕತೆ.... ಅಥವಾ ಮೊದಲಲ್ಲಿ ಬರುವ ಯಾರಾದರೊಬ್ಬನ ಹೆಸರು ಕೊನೆಗೂ ಬರುವ ಕತೆ ಅಲ್ಲವೇ ಸಾರ್"

"ಹೌದು...."

"ಮಧ್ಯೆ ಮಧ್ಯೆ ಓದುವವರಿಗೆ ಬೈಗಳು, ಉಪದೇಶ, ಗೇಲಿ ಮಾಡಿ, ರಾಜಕೀಯ ತುಂಬಿರುವ ಕತೆ ಅಲ್ಲವೇ ಸಾರ್."

"ಹೌದು ಮಹರಾಯಾ....ಹೌದು."

"ಹಾಗಾದರೆ ... ಅದಲ್ಲ ಸಾರ್...."

"ಮತ್ತೇನು ಬರೆದಿದ್ದಾನಯ್ಯ ಅವನ ತಲೆ."

"ನಿಜ ಸಾರ್.... ಅವನ ತಲೆ.... ಬಹಳ...."

"ಏನು ಬಹಳ.... ಇರೋದು ೬ಳ ಪೌಂಡು.... ಅವನ ತಲೆ ಬಹಳಾಂದ್ರೆ ದೊಡ್ಡ ತೆಂಗಿನಕಾಯಿಯಷ್ಟಿದೆ! ಬಹಳ....ಅಂತೆ....ಬಹಳ...."

"ಅಂದ್ರೆ.... ಅದನ್ನು ಓದಿದರೆ ಏನೋ ಒಂದು ತರೆಹ ಆಗುತ್ತೆ ಸಾರ್"

"ತರಹೆ ಅಂದರೆ.... ಕಾಫಿ, ಹೆಂಡ, ಹುಳಿಮಜ್ಜಿಗೆ, ಕ್ರಶ್.... ಯಾವುದು ಕುಡಿದರೆ ಆಗುವ ಹಾಗೆ? ಸಿಗರೇಟು ಸೇದಿದಾಗ ಆಗುವ ಹಾಗೆಯೋ?"

"ಸರಿ....ಸಾರ್.... ಅದೆಲ್ಲ ಕುಡಿದಾಗ ಏನೋ ಆಗುತ್ತಲ್ಲ ಹಾಗೆ+ಮತ್ತೆ ಸುಂದರಿಯಾದ ಹುಡುಗಿಯನ್ನು ನೋಡಿದಾಗ ಆದ ಹಾಗೆ+ಮನೆಯಲ್ಲಿ ಹೆಂಡತಿ ಇದಿರುನಿಂತಾಗ....ಆದ ಹಾಗೆ+ಅಡ್ವಾನ್ಸ್ ಬರಬೇಕಾದ ದಿನ ಬಾರದಾಗ ಆದ ಹಾಗೆ...."

"ಅದೇನಯ್ಯ ನಿನ್ನ ದಶಮೂಲಾರಿಷ್ಟ...."

"ಹಾಗಲ್ಲ ಸಾರ್.... ಓದಿದರೆ ಏನೇನೋ ಆಗುತ್ತೆ–ಆನಂದ ರೋಮಾಂಚನ.... ಬೇಸರ.... ಅಂತೂ ಸಾಹಿತ್ಯದಲ್ಲಿರುವ ಎಲ್ಲ ವಸ್ತೂ ಇಲ್ಲಿದೆ ಸಾರ್...."

"ನವರಸವಿದೆ.... ಪಾದರಸವೂ ಇದೆ...."

"ಹೌದು ಸಾರ್.... ಹೌದು ಸಾರ್...." ಎಂದು ಕಂಪಾಜಿಟರು ಏನೋ ಕಂಡವನಂತೆ ಕಿರಿಚಿಕೊಂಡ.

ಆಗ ನನಗನ್ನಿಸಿತು....

ಹರಟೆ.... ಪ್ರಬಂಧ.... ಕತೆ.... ಕವಿತೆ.... ಕಾದಂಬರಿ.... ನಾಟಕ.... ಇವುಗಳೆಲ್ಲ ಸಾಹಿತ್ಯದ ಅಂಗಗಳು.

ಈ ಜಿಬಿಜ್ ಬರೆದುದು ಎಲ್ಲ ಅಂಗಗಳನ್ನೂ ಕೂಡಿದೆ; ಆದರೆ ಹೆಸರು ಹೇಳಲು ಸಾಧ್ಯವಿಲ್ಲದ್ದು. ಅಂದರೆ.... ಅನಂಗ.... ಅಂತ.

ಅಥವಾ ಆದಿ ಅಂತ್ಯ ಅರಿಯದ ಉರುಟಾದ ಬುರುಡೆ ಇದ್ದ ಹಾಗೆ!

ಜಿಬಿಜ್ ಎಷ್ಟು ವಿಚಿತ್ರವೋ ಅಷ್ಟು ವಿಚಿತ್ರ ಈ ಸಾಹಿತ್ಯ ಅಂತ ನೀವು ಹೇಳಬಹುದು.

ಹೇಳಿ. ನನಗೇನು....ನಾನೂ ಕೇಳುತ್ತೇನೆ.

ಆದರೆ–ಒಂದು ಮಾತು.

ಇಲ್ಲಿ–ಈ ಸಂಗ್ರಹದಲ್ಲಿ ಬಂದ ಬರೆಹಗಳೆಲ್ಲ ಎಲ್ಲರ ಜೀವನದಲ್ಲೂ ಒಂದಲ್ಲ ಒಂದು ಬಾರಿ ತೋರಿದ ಅನುಭವ-ಸಿಡಿದ ಕಿಡಿಗಳು. ಆದುದರಿಂದ ಪ್ರಗತಿಶೀಲರ ಮಾತಿನಲ್ಲಿ ಹೇಳುವದಾದರೆ ಇದು ಸಜೀವ ಸಾಹಿತ್ಯ. ಅಂದರೆ

ನಾವೆಲ್ಲ ಇನ್ನೂ ಜೀವಸಹಿತ ಇರುವದರಿಂದ; ಇದನ್ನು ಓದುತ್ತಿರುವದರಿಂದ; ಇದನ್ನೋದಿ ಮೆಚ್ಚುವದರಿಂದ.

ಜಿಬಿಜ್ ಸಾಹಿತ್ಯ ಅಂಥ ಒಂದು ಕಂಡೂ ಕಾಣದ–ಯಾವುದೋ ಶಕ್ತಿಯನ್ನು ಒಳಗೊಂಡಿದೆ.

ಓದಿದರೆ ನೆಮ್ಮದಿ ಇದೆ; ಏನೋ ಒಂದು ತರಹೆ ತೃಪ್ತಿ, ಸುಖ, ಆನಂದ.

ನೀವೂ ಓದಿ.

ಆಗ ನಿಮಗೂ ಅನ್ನಿಸೀತು–ಹರಟೆ ಸಾಹಿತ್ಯದ ಒಂದು ಅಂಗ; ಜಿಬಿಜ್ ಬುರುಡೆ ಸಾಹಿತ್ಯದಲ್ಲಿ ಅನಂಗ ಅಂತ.

ಅಷ್ಟೆ !

ನಿಮ್ಮ ಗೆಳೆಯ—

**ಕುಮಾರ ವೆಂಕಣ್ಣ**

# 'ಮದುವೆ ಮಾಡಿ ನೋಡು'ವಾಗ—

ಇದು ನನ್ನ ಮೂರನೆಯ ನಗೆಬರಹಗಳ ಸಂಕಲನ. ನನ್ನ ಹಿಂದಿನ ಸಂಕಲನಗಳಾದ 'ಮುಗುಳುನಗೆ', ಮತ್ತು 'ಹುಡುಗಾಟ'ಗಳಂತೆ ಇದೂ ಸಹ ನಿಮ್ಮ ಬೇಸರವನ್ನು ನೀಗಿ, ಮನಸ್ಸನ್ನು ಕೆರಳಿಸಿ, ಅರಳಿಸಿ, ಮುದಗೊಳಿಸಿ, ನಿಮ್ಮನ್ನು ನಕ್ಕು ನಲಿಸಿದರೆ ಸಾಕು. ನನಗೆ ಅದೇ ತೃಪ್ತಿ; ನನ್ನ ಉದ್ದೇಶ ಸಫಲಗೊಂಡಂತೆ.

ಮೊದಲು ಈ ಸಂಗ್ರಹಕ್ಕೆ '**ಹೇಗೆ ಸಾಧ್ಯ?**' ಎಂದು ಹೆಸರಿಸಿದ್ದೆ. ಅದೇ ಕಾರಣದಿಂದಲೋ ಏನೋ 'ಹೇಗೆ ಸಾಧ್ಯ'ವನ್ನು ಮುಗಿಸಲು ಸಾಧಶಿವಿಲ್ಲದೆ ಹೋಯಿತು. ಕೊನೆಗೊಮ್ಮೆ ಸಾಧಿಸಿಯೇಬಿಡಲೆಂದು ಹೊರಟಾಗ ನನ್ನ ಮಿತ್ರರೊಬ್ಬರು 'ಅದೇನು ಪತ್ತೇದಾರಿ ಕಾದಂಬರಿಯೊ?' ಎಂದು ಕೇಳಿದರು. ನಾನು 'ಅಲ್ಲ, ಅದೊಂದು ನಾಪತ್ತೇದಾರಿ ನಗೆ ಬರಹಗಳ ಸಂಗ್ರಹ' ಎಂದು ಉತ್ತರಿಸಿದೆನಾದರೂ ಮನೆಗೆ ಬಂದು, 'ಮದುವೆ ಮಾಡಿ ನೋಡು' ಎಂದು ಅದರ ಹೆಸರು ಬದಲಾಯಿಸಿದೆ. ಸಂಗ್ರಹ ಆಮೇಲೆ ಹೇಗೋ ಸಾಧ್ಯವಾಯಿತು.

ಈ ಸಂಗ್ರಹದಲ್ಲಿ ಪ್ರಕಟವಾಗಿರುವ 'ಮದುವೆ ಮಾಡಿ ನೋಡು,' 'ಸಂಗೀತಾಭ್ಯಾಸಿ,' ಮತ್ತು 'ಉತ್ಪ್ರೇಕ್ಷೆ' ಇವುಗಳು ಈ ಮೊದಲೇ ಮೈಸೂರಿನ ಆಕಾಶವಾಣಿಯಿಂದ ಪ್ರಸಾರವಾಗಿವೆ. 'ಎಂದೆಂದಿಗೂ ನಿಮ್ಮವಳೇ.' ಕತೆ 'ಸಾಹಿತ್ಯ ಪ್ರಗತಿ'ಯಲ್ಲಿ ಪ್ರಕಟವಾಗಿದೆ. ಆಕಾಶವಾಣಿಯ ಅಧಿಕಾರಿಗಳಿಗೂ, 'ಸಾಹಿತ್ಯ ಪ್ರಗತಿ'ಯ ಸಂಪಾದಕರಿಗೂ ನಾನು ಉಪಕೃತ.

ಈ ಸಂಗ್ರಹಕ್ಕೆ ಪರಿಚಯವನ್ನು ಬರೆದು ನನ್ನನ್ನೂ ನನ್ನ ಬರಹಗಳನ್ನೂ ತಾಗಿ, ತೂಗಿ, ಅಳೆದು, ತೊಳೆದು, ನೋಡಿ, ನೋಡಿಸಿರುವ ನನ್ನ ಹಿರಿಯ ಆತ್ಮೀಯ ಗೆಳೆಯ ಕುಮಾರ ವೆಂಕಣ್ಣನವರಿಗೆ, ನಾನು, ಭಾರವಿಲ್ಲದ ನಾನು, ಬಹು ಆಭಾರಿಯಾಗಿದ್ದೇನೆ.

ಆದರೆ ನಾವಿಬ್ಬರೂ ಜತೆ ಸೇರಿ ಭೂಭಾರಿಗಳಾಗುತ್ತೇವೋ ಎಂಬ ಬಗೆಗೆ ವಾಚಕರೇ ನಿರ್ಧರಿಸಬೇಕು!

—'ಜಿಬಿಜ್'

ಆಜೀವ ಪರ್ಯಂತ

ನೀನು ಮದುವೆಯಾಗದೆ ತಾಪಸಿಯಾಗೆಂದು

ಹಠ ಹಿಡಿದಿದ್ದ

ನನ್ನ **ದೊಡ್ಡಪ್ಪ**ನವರಿಗೆ

ನಾನು 'ಮದುವೆ ಮಾಡಿಕೊಂಡು' ತಾಪತ್ರಯಪಟ್ಟು

ಈ ಪುಸ್ತಕವನ್ನು

ಅರ್ಪಿಸುತ್ತಿದ್ದೇನೆ.

## ಈ ಸಂಕಲನದಲ್ಲಿ........

# ಮದುವೆ ಮಾಡಿ ನೋಡು !

ಹಾಲಿನಲ್ಲಿ ರಾಕಿಂಗ್ ಕುರ್ಚಿಯ ಮೇಲೆ ಅಪ್ಪಾಜಿ ಅಸ್ತವ್ಯಸ್ತರಾಗಿ ಬಿದ್ದಿರುವುದನ್ನು ನೋಡಿ ನನಗೆ ಭಯವಾಯಿತು. ಅಪ್ಪಾಜಿಯ ತೆರೆದ ಬಾಯಿ, ಸುಕ್ಕುಸುಕ್ಕಾದ ಮುಖ, ಅರೆಬಿರಿದ, ಊರ್ಧ್ವ ದೃಷ್ಟಿಯುಳ್ಳ ಕಣ್ಣು ಗಳು, ಒಟ್ಟುಗೂಡಿದ ಹುಬ್ಬುಗಳು....ನನಗೆ ಗಾಬರಿಯಾಯಿತು.

ಅಡಿಗೆ ಮನೆಯೊಳಕ್ಕೆ ಒಂದೇ ಉಸುರಿಗೆ ಓಡಿಹೋಗಿ 'ಅಮ್ಮಾ.... ಅಪ್ಪಾಜಿ ಹಾಲಿನಲ್ಲಿ ಮೂರ್ಛೆ ಹೋಗಿದ್ದಾರೆ' ಎಂದು ಹೇಳಿದೆ.

ಅಮ್ಮ ಈ ಸುದ್ದಿಯನ್ನು ಕೇಳಿ ಗಾಬರಿಗೊಳ್ಳಲಿಲ್ಲ. ಕೈ ನಡುಗಿ ಪಾತ್ರೆಗಳನ್ನು ಕೆಳಗೆ ಬಿಡಲಿಲ್ಲ. ಓಡಾಡುವಾಗ ಯಾವುದನ್ನೂ ಎಡವಿ ಮುಗ್ಗರಿಸಲಿಲ್ಲ. 'ಏನೇ' ಎಂದುಕೊಂಡು ಘಟನೆ ನಡೆದ ಸ್ಥಳಕ್ಕೆ ಓಡಿಬರಲಿಲ್ಲ ....ಬದಲು ಏನೊಂದೂ ಕೇಳದವಳಂತೆ, ನಡೆದದ್ದು ತಿಳಿಯದವಳಂತೆ ತನ್ನ ಕೆಲಸಗಳನ್ನು ತಾನು ಮುಂದುವರಿಸುತ್ತಿದ್ದಳು. ಅವಳ ಮುಖ ಎಂದಿನಂತೆ ಪ್ರಶಾಂತವಾಗಿತ್ತು.

ನನಗೆ ಗಾಬರಿಯಾಯಿತು. ಅಪ್ಪಾಜಿ ಹಾಲಿನಲ್ಲಿ ಮೂರ್ಛೆಹೋಗಿ ದ್ದಾರೆ. ಆದರೂ ಅಮ್ಮ ಅವರ ಹತ್ತಿರ ಹೋಗದೆ ಇದ್ದಾಳಲ್ಲಾ....ಅವ ರಿಬ್ಬರೂ ಜಗಳವಾಡಿದರೆ?....ಯಾವಾಗ ಜಗಳವಾಡಿದರು? ಬೆಳಗಿನಿಂದ ನಾನು ಇಲ್ಲೇ ಇದ್ದೇನೆಲ್ಲಾ; ನಾನು ಕಾಣದ ಹಾಗೆ....ರಾತ್ರಿ ಜಗಳವಾಡಿದರು, ಅನ್ನೋಕೆ ಬೆಳಗ್ಗೆ ಅಂತಾ ಚೆನ್ನಾಗಿ ಮಾತಾಡ್ತಾ ಇದ್ರು!....ಯಾತಕ್ಕೆ ಜಗಳ ಆಡ್ದ್ರು....ಹೂಂ....ಎಂಥ ಸಣ್ಣ ವಿಷಯಕ್ಕೆ ಬೇಕಾದ್ರೂ ಅವರು ದೊಡ್ಡ ಜಗಳ ಮಾಡೋರು....ಅಮ್ಮನ ಸ್ವಭಾವವೇ ಅಷ್ಟು....ಕಾಲು ಕೆರದುಕೊಂಡು ಜಗಳ ತೆಗೆಯೋದು....ಅಪ್ಪಾಜಿ ತಲೆಕೆರದುಕೊಂಡು....ರಾಜೀ ಮಾಡ್ಕೊಳ್ಳೋದು.... ಇದೇನು ಹೊಸದಲ್ಲ....ಆದ್ರೂ ಇವತ್ತು....ಯಾವಾಗ, ಯಾಕೆ ಜಗಳ ಆಯ್ತು? ....ಇತ್ಯಾದಿ ಪ್ರಶ್ನೆಗಳು ನನ್ನ ಪುಟ್ಟ ಮೆದುಳನ್ನು ಕೆಣಕತೊಡಗಿದುವು. ನಾನು ಮತ್ತೆ ಅಮ್ಮನ ಮುಂದೆ ಮಾತು ಮುಂದುವರೆಸಿದೆ.

"ಅಮ್ಮಾ....ಅಪ್ಪಾಜಿ, ಹಾಲಿನಲ್ಲಿ ಕಣ್ಣುಮುಚ್ಚಿ ಕುಳಿತುಬಿಟ್ಟಿದ್ದಾರೆ, ಮುಖ ಬೆವತು, ಕಣ್ಣುರೆಪ್ಪೆ, ಹುಬ್ಬುಗಳಿಂದ ಬೆವರಹನಿ ತೊಟ್ಟಿಕ್ತಾ ಇದೆ. ಕೈಕಾಲುಗಳು ದೂರದೂರವಾಗಿ ಚಾಚಿಕೊಂಡಿವೆ. ತುಟಿಗಳಿಲ್ಲವೇನಮ್ಮಾ, ಅವು ಕುದುರೆ ಲಾಳದಾಕಾರಕ್ಕೆ ತಿರಿಗಿಕೊಂಡಿವೆ. ಕ್ರಾಪಿನಲ್ಲಿ ಬೈತಲೆ ಗೆರೆಯೇ ಪತ್ತೆ ಇಲ್ಲ ಕಣಮ್ಮಾ...."

"ಲೇ ಪಪ್ಪಿ, ಯಾಕಂಗೆ ಬಡ್ಕೋತೀಯೇ; ನಿನಗೇನು ಸ್ಕೂಲಿಲ್ವಾ ಇವತ್ತು. ಎಷ್ಟು ಗಂಟೆ ಈಗ? ಇಷ್ಟು ಹೊತ್ತಾದ್ರೂ ಇನ್ನೂ ಇಲ್ಲೇ ಇದ್ಯಾ"—ಎಂದು ಅಮ್ಮ ರೇಗಿದಳು.

"ಸ್ಕೂಲಿದೆ ಕಣಮ್ಮಾ...ಹೊತ್ತೂ ಆಗಿದೆ. ನಮ್ಮ 'ಮೇಡಂ' ಇವತ್ತಿನ ದಿನ ಬಣ್ಣದ ಪೆಟ್ಟಿಗೆ, ಹೊಲಿಗೆದಾರ, ಕ್ರೋಷಾಕಡ್ಡಿ, ಸ್ವೆಟರ್ ಉಲ್ಲನ್, ಎಂಬ್ರಾಯಡರಿ ಥ್ರೆಡ್ ಮತ್ತು ಸಾವಿತ್ರಿ ಪೂಜೆಗೆ ದುಡ್ಡು, ಇವಿಷ್ಟನ್ನೂ, ಒಂದನ್ನೂ ಮರೀದೆ, ತ ಂ ದೇ ತರಬೇಕೆಂದೂ ಇಲ್ದಿದ್ರೆ ಬೆಂಚಿನ ಮೇಲೆ ನಿಲ್ಲಿಸ್‌ತೇನೆಂದೂ ತಾಕೀತು ಮಾಡಿದಾರೆ....ಅದನ್ನು ಕೇಳೋಕೆ ಅಂತಾನೆ ಅಪ್ಪಾಜಿ ಹತ್ರ ಹೋದೆ. ಅವರು ಹಾಲಿನಲ್ಲಿ ಮೂರ್ಛೆ ಹೋಗಿದ್ದಾರೆ.... ಮುಖ ಬೆವತು, ಕಣ್ಣುರೆಪ್ಪೆ, ಹುಬ್ಬುಗಳಿಂದ ಬೆವರ್‌ಹನಿ ತೊಟ್ಟಿಕ್ತಾ ಇದೆ.... ಕೈಕಾಲುಗಳು ದೂರದೂರ ..."

"ಸಾಕುಸಾಕು....ಪುನಃ ಷುರು ಮಾಡಬೇಡ ನಿನ್ನ ಗಿರಾಗತೀ ನಾ...."

" 'ಗಿರಾಗತಿ' ಅಂತ ಶಬ್ದಾನೇ ಇಲ್ವಂತಮ್ಮ ಕನ್ನಡದಲ್ಲಿ ನಮ್ಮ ಕನ್ನಡಾ 'ಮೇಡಂ' ಹೇಳಿದ್ರು."

"ನಿಮ್ಮ 'ಕನ್ನಡಾ ಮೇಡಂ'ಗೆ ತಲೇಲಿ ಬುದ್ಧಿ ಇಲ್ಲ...."

"ಹಾಗಾದ್ರೆ ಇನ್ನೆಲ್ಲಿದೆಯಮ್ಮಾ ಅವರಿಗೆ ಬುದ್ಧಿ ?"

"ಸುಮ್ನೆ ಹೋಗ್ತೀಯ ಇಲ್ವೇ....ಕಣೀ ಓದ್ತಾಳೆ ಇಲ್ಲಿ ಬಂದು."

"ಅಪ್ಪಾಜಿ...."

"ನಿಮ್ಮಪ್ಪಾಜಿ ಕೈಲಿ ಏನಾದ್ರೂ ಇತ್ತೇನೆ?...."

"ಹೂಂ... ಕಣಮ್ಮಾ ಕಾಗ್ದ ಇತ್ತು. ಅದನ್ನು ತೆಗೆದು ಬೀಗದ ಕೈಗೊಂಚಲು ಕೊಟ್ಟು, ತಲೆಗೆ ನೀರು ತಟ್ಟಿ, ನೀರು ಕುಡಿಸಬೇಕಮ್ಮಾ.... ಹಾಗಂತ ನಮ್ಮ 'ಪ್ರಥಮ ಚಿಕಿತ್ಸೆ ಮೇಡಂ' ಹೇಳಿದ್ರು."

"ನಡಿಯೇ ಅತ್ತ. ಅವಳಿಗೆ ಮಹಾ ಗೊತ್ತು. ಅವಳು ಹೇಳಿಬಿಟ್ಲು.... ನೀನು ಕೇಳಿಬಿಟ್ಟೆ. ಅದು, ಬೀಗದ ಕೈಗೊಂಚಲು ಕೊಟ್ಟು ನೀರು ಕುಡಿಸಿದ್ರೆ ಹೋಗೊ ಮೂರ್ಛೆ ಅಲ್ಲ. ಅದನ್ನ ತಿಳ್ಕೊಬೇಕಾದ್ರೆ ನಾವು ಬಹಾಳ ನೀರು ಕುಡೀಬೇಕು."

"ಕೊಡಮ್ಮ ನೀರು ಕುಡೀತೀನಿ. ಆಮೇಲೆ ಹೇಳೀವಂತೆ ಅದ್ಯಾವ ಮೂರ್ಛೆ ಅಂತ"

"ಅದು ಬಿಲ್ ಮೂರ್ಛೆ...."

"ಅಂದ್ರೇನಮ್ಮಾ .... ಬಹಳ ಕೆಟ್ಟದ್ದೇ ಅದು....ಅದಕ್ಕೇನೌಷಧಿ ? "

"ಅದಕ್ಕೇ ಔಷಧೀನೂ ಇಲ್ಲ ಪಥ್ಯವೂ ಇಲ್ಲ. ತನ್ನ ಪಾಡಿಗೆ ತಾನೇ ಸರಿಹೋಗತ್ತೆ! ಆ ಧರ್ಮ ಸಮಾಜದ ಸೆಟ್ಟಿ, ನಾವು ನಿನ್ನೆ ತಕ್ಕೊಂಡ್ವೆಲ್ಲಾ ಹನ್ನೆರಡು ಧರ್ಮಾವರದ ಕುತ್ತಾಲದ, ಕೊರನಾಡಿನ ಸೀರೆಗಳ ಬಿಲ್ಲನ್ನ ಕಳುಹಿಸಿದ್ದಾನೆ ಅಂತ ತೋರುತ್ತೆ. ಅದೇ ನಿಮ್ಮಪ್ಪಾಜಿ ಕೈಲಿರೋ ಕಾಗದ ಅಂತ ಕಾಣುತ್ತೆ;... ಮೊದಲೆ ಚಂದ....ಈಗ ಕೇಳ್ಬೇಕೆ, ಕೋತಿಗೆ ಹೆಂಡ ಕುಡಿಸಿ, ನೆಶ್ಯ ಏರಿಸಿದ ಹಾಗಿದೆ, ನಿಮ್ಮಪ್ಪಾಜಿಗೆ....ಮೂರ್ಛೇನೂ ಬರ್‍ತದೆ....ಜ್ವರಾನೂ ಬರ್‍ತದೆ."

"ನಾನು ಸ್ಕೂಲಿಗೆ ಹೋಗ್ತಾ ಹಾಗೇ ಡಾಕ್ಟರನ್ನ ಬರಹೇಳ್ಲೇನಮ್ಮಾ?"

"ಇನ್ನು ತಲೆಹರಟೆ ಮಾಡಿದೇ ಅಂದ್ರೆ ಏಟು ಬೀಳುತ್ತೆ, ನೋಡು.... ಡಾಕ್ಟ್ರನ್ನ ಕರ್‍ಕೊಂಡು ಬರ್‍ತಾಳಂತೆ, ಡಾಕ್ಟ್ರನ್ನ. ಹೋಗೆ ಸ್ಕೂಲಿಗೆ ನಿನ್ನಷ್ಟಕ್ಕೆ ನೀನು....ಮೇಡಂಗೆ ಹೇಳು ನಮ್ಮನೇಲಿ ಮದುವೆ ಗಲಾಟೆ... ಮದುವೆ ಎಲ್ಲಾ ತೀರಿದ ಮೇಲೆ ನೀವೇಳಿದ್ದೆಲ್ಲಾ ತರಿಸಿಕೊಡ್ತಾರಂತೆ ಅಂತ... "

"ಹೋಗಲಿ, ನಾನು ಯಾವತ್ತಿನಿಂದ ರಜಾ ತಕ್ಕೊಳ್ಲಿ ಅಣ್ಣನ ಮದುವೇಗೆ....ಮೇಡಂಗೆ ಒಂದು ಲಗ್ನಪತ್ರಿಕೆ ಕೊಡಮ್ಮಾ ಕೊಡ್ತೀನಿ. ಅವರ ಹೆಸರು 'ತ್ರಿಪುರಸುಂದರಿ' ಅಂತ ಕಣಮ್ಮಾ....ಅವತ್ತು ಲಾಲ್‌ಬಾಗಿನಲ್ಲಿ ನಾನು ತೋರಿಸಲಿಲ್ವೇನಮ್ಮಾ....ಕಪ್ಪಗೆ, ಗುಂಡು ಬದನೇಕಾಯಿಯಂಗೆ ದಪ್ಪಗೆ.... ನೀನು 'ಗುಜ್ಜಾನೆ ಮರಿ' ಅಂತ ಕರೆದೆ, ಅಪ್ಪಾಜಿ 'ಮಿರುಮಿರುಗುವ ಹಾ.... ಕರೀತಾರೆಯೆ ನೀಂ'..ಅಂತ ಅವಳನ್ನ ತೋರಿಸುತ್ತ ಗೇಲಿ ಮಾಡಿದರೆಲ್ಲಮ್ಮಾ; ಅದೇನ್ ಬಣ್ಣಾಂತ ನೀನು ಕೇಳಿದಾಗ....ಅದು 'ಗ್ಯಾರಂಟಿ' ಬಣ್ಣ ಕಣೇ, ನಿನ

ಗೇನು ಗೊತ್ತು, 'ಕೆಂಪು ರಂಪು....ಕಪ್ಪು ಕಸ್ತೂರಿ' ಅಂತ, ಹೆಂಗಸರಲ್ಲಿ ಕಪ್ಪೇ ಶ್ರೇಷ್ಠ ಎಂದು ಅಪ್ಪಾಜಿ ಹೇಳಿದಾಗ, ನಿನ್ನ ಬಿಳಿಯ ಮುಖ ಕೆಂಪಗಾಗಿ ನೀನು ಜಗಳಕ್ಕೇ ಹೋದೆ....ಅವ್ರೇ....ತ್ರಿಪುರ ಸುಂದರಿ....ನಮ್ಮ ಮೇಡಂ."

"ನಿನಗೆ ಅದೇನ್ ಜ್ಞಾಪಕಾನೆ .... ಹತ್ತೊರ್ಷದ್ದಾದ್ರೂ ಚಾಚೂ ತಪ್ಪದಂಗೆ...."

"ಕೊಡಮ್ಮಾ ಮತ್ತೆ, ಅವರಿಗೊಂದು ಲಗ್ನಪತ್ರಿಕೆ....ನಮ್ಮ 'ಮೇಡಂ'ಗೆ"

"ಈಗ 'ಮೇಡಂ'ಗೂ ಇಲ್ಲ ಮಂತ್ರಿಗಳ್ಗೂ ಇಲ್ಲ ಲಗ್ನಪತ್ರಿಕೆ. ಎಲ್ಲಾ ನಿನ್ನೇನೆ ಮುಗಿದೋದೊ!"

"ಹೌದೌದು. ಅಪ್ಪಾಜಿ ಹೇಳ್ತಾ ಇದ್ರು....ನೀನು ಕ್ಲಬ್ಬಿನಲ್ಲಿ ಹುಚ್ಚಾ ಪಟ್ಟಿ ಹಂಚಿ ಹಾಳು ಮಾಡಿದೇ ಅಂತ"

"ಹೌದು ಕಣೇ....ನಿಮ್ಮಪ್ಪಾಜಿ ಹಾಗೆ ಜಿಪುಣತನ ಮಾಡ್ತಾ ಕೂತರೆ ಆಗತ್ತ್ಯೆ? ನೋಡಿದೋರು ನಗ್ತಾರೆ. ನಾನೆಷ್ಟೊ ಹೇಳ್ದೆ ನಿಮ್ಮಪ್ಪಾಜಿಗೆ ಇನ್ನೊಂದೆರಡು ಸಾವಿರಾ ಹಾಕ್ಸಿ ಅಂತ. ನನ್ನ ಮಾತೆಲ್ಲಿ ಕೇಳ್ತಾರೆ ಅವರು. 'ಯಾಕೆ....ಮಾಡೋಕೆ ಬದುಕಿಲ್ಲದೆ ಸುಮ್ಮನೆ' ಅಂತ ನನ್ನ ಮೇಲೆ ರೇಗಾಡಿ ದರು. ಈಗ... ಲಗ್ನಪತ್ರಿಕೇಗೆ ಪದರಾಟವಾಗಿದೆ. ಹಿರೇ ಮಗನ ಮದುವೆ ಬಹಾಳ ಅದ್ಧೂರಿಯಿಂದ ಮಾಡೋಣ ಅಂತ ನಾ ನಿದ್ರೆ........ಅಗ್ಗದಲ್ಲಿ ಮಾಡೋಣ, ಸಾಧ್ಯವಾದ್ದು ಮಿಗಿಸೋಣ ಅಂತ ನಿಮ್ಮಪ್ಪಾಜಿ ಹಠ."

"ಅಗೊಮ್ಮಾ ಅಪ್ಪಾಜಿ ನಿನ್ನ ಕೂಗ್ತಾ ಇದಾರೆ" ಎಂದು ಹೇಳಿ ನಾನು ಹಾಲಿಗೆ ಓಡಿದೆ.

* * *

"ಬಂದಾ"—

"ಹೂಂ"

"ಬಂದಾ....ಇಲ್ಲಿ"

"ಹೂಂ...."

"ಬಂದಾ ಇಲ್ಲಿ ಸ್ವಲ್ಪಾ"

"ಹೂಂ...."

"ಬಂದಾ ಇಲ್ಲಿ ಸ್ವಲ್ಪಾ, ಏನೇ....ಬಂದಾ ಇಲ್ಲಿ"

"ಬಂದೇ....ಬಂದೇ....ಬಂದೇ....ಏನು, ಕೂಗೋಕೆ ಷುರು ಮಾಡಿದ್ರೆ ಒಂದೇ ಉಸುರೇ....ಪಾತ್ರೆ ಸಾಮಾನು ಪಟ್ಟಿ ಮಾಡ್ತಾ ಇದೇನೆ; ಅವನ್ನೆಲ್ಲಾ ಬೇಗ ತೆಗಿಸಿಕೊಂಡು ಬನ್ನಿ...."

"ಅಲ್ವೇ, ಈಗ ಇಷ್ಟು ಪಾತ್ರೆ ಸಾಮಾನೂ ಬೇಕೆ? ಮನೇಲಿರೊ ಸಾಮಾನ್ನಲ್ಲೇ ಸರಿದೂಗಿಸಿಕೊಳ್ಳೋಕೆ ಆಗೊಲ್ವೆ. ಇವಕ್ಕೆಲ್ಲ ಈಗ ದುಡ್ಡಿಡಬೇಕಂದ್ರೆ....ಹೇಗೆ, ಎಲ್ಲಿಂದ ತರೋದು, ಏನು ಕತೆ...."

"ಹೋದಷ್ಟು ದಿನಕ್ಕೂ....ನಿಮ್ಮದು ಇದೇ ರೀತಿಯಾಯ್ತು....ಹಿರೇ ಮಗನ ಮದ್ವೆ ಅದ್ದೂರಿಯಾಗಿ ಮಾಡ್ಬೇಡ್ವೆ. ನಾಲ್ಕಾರು ಜನ ನೆಂಟರಿಷ್ಟರು ಸೇರಿದ್ದಾಗ ಸರಿಯಾದ ಪಾತ್ರೆ ಪಲಾಸು ಇಲ್ದಿದ್ರೆ ನಗೆಪಾಟಲಾದೀತು....ಪಾತ್ರೆಗಳಿಲ್ಲದೆ ಪ್ರಾಣ ಬಿಡೋರು ನಾವು ತಾನೇ,....ನಿಮಗೇನು ಗೊತ್ತಾದೀತು.... ನಮ್ಮ ಸಂಕಟ...."

"ಆಗ್ಲೆ, ಆಗ್ಲೆ, ನಮ್ಮಾಫೀಸಿನ ಶಂಕ್ರಯ್ಯನಿಗೆ ಹೇಳ್ತೀನೆ. ಮೂರುದಿನದ ಮಟ್ಟಿಗೆ ಈ ಪಾತ್ರೆಗಳನ್ನೆಲ್ಲಾ ಬಾಡಿಗೆಗೆ ತರೋಕೆ ವ್ಯವಸ್ಥೆ ಮಾಡು ಅಂತ; ಇಷ್ಟೇ ಪಾತ್ರೆಗಳು ತಾನೇ ಬೇಕಾಗೋದು ?"

"ಸದ್ಯಕ್ಕಿಷ್ಟೆ....ಮುಂದೆ ಜ್ಞಾಪ್ಕ ಬಂದ್ರೆ ನೋಡ್ಕೊಳ್ಳೋಣ....ಅದು ಸರಿ, ಈಗ ಚಪ್ರದ್ದೇನು ಮಾಡಿದ್ರಿ ?"

"ಓಹೋ, ಆಗ್ಲೆ 'ರೆಡಿ'ಮಾಡಿಬಿಟ್ಟಿದೀನಿ. ನಮ್ಮಾಫೀಸಿನ ಹೆಡ್ ಕ್ಲಾರ್ಕಿಗೆ ಚಪ್ಪರ ಹಾಕೋರು ಗೊತ್ತಂತೆ. ಅವರ ಕೈಲಿ ಇಪ್ಪತ್ತು ರೂಪಾಯಿ ಕೊಟ್ಟಿದ್ದೇನೆ. ದಿವ್ಯನಾಗಿ ಚಪ್ಪರ ಹಾಕಿಸ್ತೇನೆ ಅಂತ ಹೇಳಿದಾನೆ ಆತ. ಚಪ್ರ ಹಾಕೋರು ನಾಳೆ ಬೆಳಿಗ್ಗೆ ಬರ್ತಾರೆ."

"ಇಪ್ಪತ್ತು ರೂಪಾಯಿಗೆ ಅದೆಂತ ಚಪ್ರ ಹಾಕ್ತಾನಿ ಆತ. ನೀವಿದೇ ರೀತಿ ಮಾಡೋದು. ಹೊರೆ ಹುಲ್ಲು ಬಿಟ್ಟುಬಿಟ್ಟು ಹಿಡಿ ಹುಲ್ಲಿಗೆ ಹಿಡಿದಾಡೋದು. ಅದೇಗೊ ಅವನಿಗೆ ಹೇಳಿಬಿಡಿ ಚಪ್ರ ಬಹಳ ಚೆನ್ನಾಗಿರಬೇಕೂಂತ. ಮದುವೆಯ ವಿಜೃಂಭಣೆ ಮೊಟ್ಟಮೊದಲು ಕಾಣೋದು ಚಪ್ಪರದಿಂದಲೇ. ಚಪ್ರ 'ಡಿಕಾವಾ'ಗಿ ಇರದೆ ಚಪ್ರದೊಳಗಡೆ ಎಷ್ಟು ವೈಭವದಿಂದ ನಡೆದರೂ ಅದು ಮಂಕಾಗಿ ಕಾಣುತ್ತೆ."

"ಹೇಗಿದ್ರೂ ನಾಳೆ ಬೆಳಗ್ಗೆ ಅವನೇ ಇಲ್ಲಿಗೆ ಬರ್‍ತಾನೆ. ಅವನಿಗೆ ನೀನೇ ಹೇಳಿ ಹೇಗೆ ಬೇಕೊ ಹಾಗೆ, ಎಲ್ಲಿ ಬೇಕೊ ಅಲ್ಲಿ ಚಪ್ಪರ ಹಾಕಿಸಿಕೊ.... ಆಯ್ತೊ....ಇನ್ನು ನಿನ್ನ ಚಪ್ಪರೋಪನ್ಯಾಸ ನಿಲ್ಲಿಸು"

"ನಿಮ್ಮ ಕುಚೇಷ್ಟೆ ಮಾತು ಮಾತ್ರ ಬಿಡಬೇಡಿ; ಅಕ್ಕಸಾಲಿಗನೇನಂದಾ ತಾಳೀಗೆ ? "

"ಅವನು ಕೊಂಚ ತಾಳಿ, ಕೊಡ್ತೇನೆ ಅಂದ. ಬಹುಶಃ ನಾಳೆ ಕೊಟ್ಟಾನು."

"ಇನ್ನೂ ಬಹುಶಃ ಗಿಹುಶಃ ಅಂತಿದ್ದೀರಾ ಮದುವೆ ಮೂರುದಿನ ಇಟ್ಕೊಂಡು. ಒಂದು ತಾಳಿ ಮಾಡೋಕೆ ಎಷ್ಟು ದಿನಾನರತೆ. ಇಷ್ಟು ಹೊತ್ತಿಗೆ ನೂರೆಂಟು ತಾಳಿ ಮಾಡಬಹುದಾಗಿತ್ತು."

"ಅವನೂ ಮಾಡಿದ್ದಾನೆ, ನೂರೆಂಟು ತಾಳೀನ. ಆದ್ರೆ ನಮ್ಮ ತಾಳೀನ ನಾಳೆ ಕೊಡ್ತಾನೆ."

"ಅದಕ್ಕೇ ನಾನು ಮೊದಲೇ ಹೇಳಿದ್ದು, ಈ ಕುಂಬಕರ್ಣಾಚಾರಿಯ ಹತ್ತಿರ ಬೇಡ್ರಿ, ಅವನು ಮದುವೆ ಆದಮೇಲೆ 'ತಾಳಿ' ಮಾಡ್ಕೊಡೋನು ಅಂತ; 'ಸುಮ್ನಿರೆ ನಿನಗೇನು ಗೊತ್ತು ಈಗಿನ ಕಾಲಕ್ಕೆ ಅವನೇ ತುಂಬಾ ಚೀಪ್' ಎಂದು ಅವನಿಗೇ ಕೊಟ್ಟಿರಿ."

"ನಿನಗೇಕೆ ನಾಳೆ ತಂದುಕೊಟ್ರೆ ಸರಿಯಲ್ಲವೊ ! ಹೇಗೂ ತಾಳಿ ಕಟ್ಟೋದು ನಾಡಿದ್ದು ಒಂಭತ್ತು ಘಂಟೆಗೆ ತಾನೆ ! "

* * *

"ಕೂಗಿದ್ರಾ"

'...........'

"ಕೂಗಿದ್ರಾ....ಅಂದ್ರೆ...."

"ನಿನ್ನೇ .... ನಾನು ಕೂಗಿದೆ ಅಂದ್ಯಾ....ಭೇಷ್ ಇದೂ ಸರಿಯೆ, ಒಂದೇ ಸಮ 'ಬಾರೆ ಬಾರೆ' ಅಂತ ಬೊಂಬಡ ಮಾಡ್ಕೊಂಡ್ರೂ 'ಕಮಕ್ ಕಿಮುಕ್' ಅನ್ನದೆ ನಿನ್ನ ಕೆಲಸ ನೀನು ಮಾಡ್ತಿರ್‍ತೀಯಾ, ಆದ್ರೆ ಕೂಗ್ದೆ ಇದ್ದಾಗ ಮಾತ್ರ 'ಕೂಗಿದ್ರಾ ಅಂದ್ರೆ' ಅಂತ ಓಡೋಡಿ ಬರ್‍ತೀ...."

"ಅದಕ್ಕೆಷ್ಟೊಂದು ಮಾತೇಕೆ ? ಕೂಗಿದ್ರೆ ಕೂಗಿದೆ ಅನ್ನಿ ; ಇಲ್ದಿದ್ರೆ ಕೂಗ್ಲಿಲ್ಲ ಅನ್ನಿ...."

"ಸರಿ ಆಗ್ಗೆ ಕೂಗ್ಲಿಲ್ಲ. ಆದ್ರೆ ಈಗ ಕೂಗಿದೆ...."

"ಅದೇನೊ ನಿಮಗೆ ಹೇಳ್ಬೇಕು ಅಂತ ಬೆಳಗ್ಗಿನಿಂದ ಜ್ಞಾಪಿಸಿಕೋತಿದ್ದೆ. ನಿಮ್ಮ ಮುಖ ನೋಡಿದ ತಕ್ಷಣ ಮರ್ರೋಯ್ತಲ್ಲ."

"ಏನಂದೆ...."

"ಹಾಂ....ವಾಲಗದೋರಿಗೆ ಹೇಳಿದ್ರಿ ತಾನೆ, ನಾಳೆ ಬೆಳಿಗ್ಗೇನೇ ಬರ್ಬೇಕು ಅವರು ಬಾರ್ದ್ನೋಕೆ."

"ನಾನೇ ಬಾರಿಸ್ತೇನೆ ಬಿಡೆ. ಈಗಾಗ್ಲೆ ಇರೋ ಖರ್ಚು ಕೂಡಿ ನೋಡಿದ್ರೆ 'ವಾಲಗ' ತಾನೇ ತಾನಾಗಿ ಹೊರಡುತ್ತೆ. ಇದಕ್ಕೆಲ್ಲ ದುಡ್ಡು ಎಲ್ಲಿಂದ ತರೋದು, ಹೇಗೆ ತರೋದು...."

"ಬ್ಯಾಂಕಿನಿಂದ ತರೋದು, ಚಕ್ಕು ಬರೆದುಕೊಟ್ಟು ದುಡ್ಡು ತರೋದು."

"ಹೂಂ....ಬ್ಯಾಂಕಿನಲ್ಲಿ ಕೂತಿದೆ ಹಣ ...ಚೀಪಾಗಿ ಮಾಡೋಣಾಂತ ನಾನಿದ್ರೆ....ವಾಲಗ ಇಲ್ಲದ್ದು ಮದುವೇನೆ ಆಗೊಲ್ಲವೇ ? "

"ಮದುವೆ ಮನೇಲಿ ವಾಲಗ ಆಗದಿದ್ದರೆ ?"

"ಹೇಗೂ ಮಕ್ಕಳ ವಾಲಗ ಆಗ್ತಾ ಇರ್ತದೆ. ಅದರ ಜೊತೆಗೆ 'ಲೌಡ್ ಸ್ಪೀಕರ್' ಹಾಕಿಸಿದ್ರಾಯ್ತಲ್ಲ. ವಾಲಗಕ್ಕಿಂತ ಅದು 'ಚೀಪ್' "

"ಅದೇ ನಿಮ್ಮ ಸ್ನೇಹಿತರ ಮಗಳ ಮದುವೆಯಲ್ಲಿ ಹಾಕಿದ್ರಲ್ಲಾ ಲೌಡ್ ಸ್ಪೀಕರ್ನಾ. ಗಂಡು ಕರ್ರೊಂಡು ಬರ್ಬ್ಬಾಗ....'ಓ ಜಾನೆವಾಲೆ ಬಾಲಮಾ,' ಹೆಣ್ಣು ಬಂದು ಮಂಟಪದಲ್ಲಿ ನಿಂತಾಗ 'ಗಯೀ....ತೂ ಗಹೀ ಅಮರ ಭಾವನ ಅಮರ ರಹಿ' ಇಂಥ ಅಸಂಬದ್ಧ ಹಾಡುಗಳು....ಥೂ ಅಪಶಕುನ."

''ಅಯ್ಯೋ ನಿನಗೇನೆ ಗೊತ್ತು."

"ದೇವಸ್ಥಾನಗಳಲ್ಲಿ ದೇವರ ಪೂಜೆಯಾಗುವಾಗಲೂ ಲೌಡ್‌ಸ್ಪೀಕರ್. ಅದರಲ್ಲೂ ಫಿಲಂ ಹಿಟ್ಸ್. ಅದಿಲ್ಲದಿದ್ರೆ ದೇವಸ್ಥಾನಕ್ಕೆ ಹೋಗೋರಾರು.ದೇವರಿಗೆ ದಕ್ಷಿಣೆ ಹಾಕೋರಾರು ? ಆಂಜನೇಯಸ್ವಾಮಿ ಪೂಜೆ ಆಗ್ತಾ ಇರುತ್ತೆ, 'ಭೂಲನ ಜಾನಾ....' ಆದ ಮೇಲೆ 'ಮೈಹುಂ....ಅಲ್ಲಾಡೀನ್ ಅಲ್ಲಾಡೀನ್'....ಅದೂ ಮುಗೀತೆಂದ್ರೆ 'ಸಂಡೇ-ಕಿ-ಸಂಡೆ'. ಎಲ್ಲಿಯ ಆಂಜನೇಯ ಎಲ್ಲಿಯ ಈ 'ಫಿಲಂ ಹಿಟ್ಸ್'. ಈಗಿನ ಕಾಲದ ಹುಡುಗ್ರು ಇನ್ನೇನು ಒಂದು ಪದ್ಯ ಗಟ್ಟಿಮಾಡ್ಲಿಲ್ಲ. ಒಂದು ಗದ್ಯ ಗಟ್ಟಿಮಾಡ್ಲಿಲ್ಲ. ಈ 'ಫಿಲಂ ಹಿಟ್ಸ್' ಮಾತ್ರ ಸದಾ ಪಾರಾಯಣ....

ಸದ್ಯ ನಮ್ಮ ಹುಡುಗ ಮೂರ್ತಿ ಹಾಗಲ್ಲ."

''ಹೂಂ ಅವನಿಗೆ ಪದ್ಯವೂ ಬರೋಲ್ಲ, ಫಿಲಂ ಹಿಟ್ಸೂ ಬರೋಲ್ಲ....''

"ನಿಮಗೆ ಅವನ ಬಗ್ಗೆ ಎರಡು ಒಳ್ಳೆ ಮಾತು ಆಡೋದೂ ಬರೋಲ್ಲ."

"ಅದು ಹೋಗಲಿ....ಲೌಡ್‌ಸ್ಪೀಕರಿನಲ್ಲೇ ವಾಲಗದ ಸೆಟ್ ಹೇಳಿ ಹಾಕಿಸಿದ್ರೆ ಹೇಗೆ....ವರನ್ನ ಕರ್‍ಕೊಂಡು ಬಂದಾಗ ಒಂದು ತಂಜಾವೂರ್ ಸೆಟ್ ವಾಲಗ,....ಫಸ್ಟ್‌ಕ್ಲಾಸ್ ಸೆಟ್."

''ರೀ....ನೋಡ್ದೋರು ಏನಂತಾರೆ. ಮಂಗಳ ಕಾರ್ಯದಲ್ಲಿ ಮನೆ ಮುಂದೆ ಲಕ್ಷಣವಾಗಿ ವಾಲಗ ಬೇಡ್ವೆ. ಒಳ್ಳೆ ಮಾತು ಹೇಳ್ತಿರಿ.''

"ಅಂತೂ ವಾಲಗ ಬೇಕೇಬೇಕು ಅನ್ನು. ಮೂರೂರು ಸುಳ್ಳಪ್ಪನಿಗೆ ಈಗ ಹದಿನೈದು ದಿನಗಳ ಕೆಳಗೇ ಹೇಳಿದ್ದೆ. ಆತ ನಾನೆಲ್ಲ ವ್ಯವಸ್ಥೆ ಮಾಡ್ತೀನಿ ಅಂತ ಹೇಳಿ ಹೋದವನು....ಅವನ ದಾದೂ ಇಲ್ಲ, ಫಿರ್ಯಾದೂ ಇಲ್ಲ. ಅವರ ಮನೆ ಮದುವೆಗೆ ಬಹಳ ಚೀಪ್‌ರೇಟಿನಲ್ಲಿ ವಾಲಗದ ಸೆಟ್ ತಂದಿದ್ದ....ನಲವತ್ತು ರೂಪಾಯೋ ಅರವತ್ತು ರೂಪಾಯೋ ಅಂದ."

"ಅವತ್ತು ಆರತಕ್ಷತೆಗೆ ಅಂತ ಹೋದೋರು ಅರ್ಧ ರಾತ್ರೆಗೆ ಬಂದ್ರೆಲ್ಲಾ ....ಯಾಕ್ರೀ ಇಷ್ಟೊತ್ತು ಆಯಿತು ಅಂತ ಕೇಳಿದ್ದಕ್ಕೆ....ವಾಲಗ ಬಹಳ ಚೆನ್ನಾಗಿತ್ತು ದಿವ್ಯನಾದ ಸೆಟ್ ಎಂದು ಹೇಳಿದ್ರೆಲ್ಲಾ ಆ ಸೆಟ್ಟೆ ?"

"ಅದೇನೊ ಗೊತ್ತಿಲ್ಲ...."

"ಇಂಥ ವಿಚಾರಗಳಲ್ಲಿ ಅವರಿವರನ್ನು ನೆಚ್ಚಿಕೊಂಡ್ರೆ ಪ್ರಯೋಜನವಿಲ್ಲ. ನೀವೇ ಯಾವುದಾದ್ರೂ ಸೆಟ್ಟನ್ನ ಗೊತ್ತುಮಾಡಿ. ಆಮೇಲೆ ಮದುವೆಯ ಕಾಲ, ವಾಲಗದವರು ಸಿಕ್ಕದೆ ಮದುವೆ ಮುಂದುವರಿಸಬೇಕಾದೀತು."

"ಅಂತ ಸಮಯದಲ್ಲಿ ನಾನೇ ಬಾರಿಸ್ತೀನಿ ಅಂತ ಹೇಳಿದ್ದೇನೆಲ್ಲಾ"

''ನಿಮ್ಮ ಓಲಗ ಕೇಳಿದ್ರೆ ನೆಂಟರಿಷ್ಟರು ಪರಾರಿಯಾದಾರು.''

"ಸದ್ಯ ನೆಂಟರಿಷ್ಟರನ್ನು ಮದುವೆಯಾದ ತಕ್ಷಣ 'ಪರಾರಿ' ಮಾಡಿಸುವಂಥ ಪರಾರಿಪ್ರಿಯ ರಾಗ, ತಾನ, ಪಲ್ಲವಿಯನ್ನು ಕಂಡುಹಿಡಿದವರಿಗೆ ನಾನು ಚಿರಋಣಿ."

''ಅದಿನ್ನೆಷ್ಟು ಜಿಪುಣತನ ಮಾಡ್ತೀರೊ ನಾನು ಬೇರೆ ಕಾಣೆ. ನೆಂಟರಿಷ್ಟರನ್ನು ಬಿಟ್ಟು ಮದುವೆ ಮಾಡೋದೆ ?''

"ಉಹುಂ....ನೆಂಟರ ಇಷ್ಟಪೂರ್ತಿಗಾಗಿಯೇ ನಾವು ಮದುವೆ ಮಾಡೋದು. ಅವರು ಇಷ್ಟಪೂರ್ತಿ, ಕಂಠಪೂರ್ತಿ ತಿಂದು, ತೇಗಿ, ನೀರು ಕುಡಿದು, ನಮಗೂ ನೀರು ಕುಡಿಸಿದ ಮೇಲೆ ನಮ್ಮ ಸೊಂಟ ಪೂರ್ತಿ ಬಿದ್ದು ಹೋಗೋದು."

"ಈಗೇನು ನನಗೆ ವಾಲಗವೂ ಬೇಡ, ಮೇಳವೂ ಬೇಡ. ಮಾನ ಹೋಗೋದು ನಿಮಗೆ ಹೊರ್ರು ನನಗಲ್ಲವಲ್ಲಾ."

"ಆಗ್ಲೆ ಕೋಪ ಬಂತೇ ನಿನಗೆ....ಇಗೊ ಹೊರಟೆ ಸರಿಯಾದ ಒಂದು ಸೆಟ್ಟನ್ನು ಚೀಪಾಗೆ ಹಿಡ್ಕೊಂಡು ಬರ್ತೀನೆ ನೋಡುವಿಯಂತೆ."

* * *

"ಅಲ್ಲಾಂದ್ರೆ....ಮಗೀಗೆ ಬಟ್ಟೆ ಹೊಲಿಸಬೇಡ್ವೆ ?"

"ಯಾವ ಮಗೀಗೆ? ಹುಟ್ಟೊ ಮಗೀಗಾ ?"

"ನಿಮಗಿಷ್ಟು ವಯಸ್ಸಾಗಿದ್ರೂ ಹುಡುಗಾಟ ಬಿಟ್ಟಿಲ್ಲ. ಮಗೀಗೆ ಅಂದ್ರೆ ವರನಿಗೆ"

"ಅವನಿಗೆ ಈಗ ಬೇಕಾದಷ್ಟು ಬಟ್ಟೆ ಇವೆಯೆಲ್ಲ."

"ಇಲ್ಲ ಅಂತ ಯಾರಂದ್ರು. ಮದುವೆ ಬಟ್ಟೆ...."

"ಅಲ್ವೆ. ಅವನತ್ರ ಇರೋ ಬಟ್ಟೇಲಿ ಅವನಿಗೆ ಹದಿನೆಂಟು ಮದುವೆ ಮಾಡ್ಬಹುದು."

"ಅದ್ರಲ್ಲೂ ಮಿಗಿಸೋಕೆ ನೋಡ್ತೀರೆಲ್ಲ. ಇದ್ರೆ ನಿಮ್ಮಂಥವರೇ ಇರಬೇಕ್ರಿ."

"ಮಿಗಿಸೋದೆಲ್ಲಿಂದ ಬಂತೆ. ಸದ್ಯ ಮುಳುಗಿಹೋಗದಿದ್ರೆ ಅಷ್ಟೇಸಾಕು!"

"ಇಷ್ಟೆಲ್ಲಾ ಖರ್ಚಿಟ್ಟು ಮದುವೆ ಮಾಡೋದೆ ಉಂಟಂತೆ ಒಂದೆರಡು ಒಳ್ಳೆ ಬಟ್ಟೆ ಹೊಲಸಿದ್ರೆ ಏನು ಕೊಳ್ಳೆಹೋಗುತ್ತೆ ?"

"ಯಾಕೆ ವಟವಟಾ ಅಂತೀಯೆ, ಆಗ್ಲೆ ಹೊಲೆಹಾಕಿದೀನಿ ಕಣೆ!"

"ಮತ್ತೆ, ನನ್ನತ್ರ ಸುಳ್ಳು ಹೇಳ್ತಾ ಇದ್ರಿ....ಪರವಾಗಿಲ್ಲ ನೀವೂನೆ. ಎಲ್ಲಿ ಹೊಲೆ ಹಾಕಿದೀರಿ? ನಿಮ್ಮ ಟೈಲರ್ ತಾನೆ? ನಿಮ್ಮ ಫ್ಯಾಮಿಲಿ ಟೈಲರ್! ನಿಧಾನ್‌ಸಾ ಅಂಡ್ ಬ್ರದರ್ಸ್ ತಾನೆ!....ಈಗ ಬಟ್ಟೆ ಕೊಟ್ರೆ ಮುಂದಿನ ವರ್ಷಾನೆ ಕೊಡೋದು ಅವನು...."

"ಎಲ್ಲಾ ದರ್ಜಿಯವರೂ ಅಷ್ಟೇನೆ ಕಣೆ. ಹೊತ್ತಿಗೆ ಸರಿಯಾಗಿ ಕೊಡೊಲ್ಲ. ಕುತ್ತಿಗೆಯ ಮೇಲೆ ಕೂತ್ಕೊಳ್ಳದ ಹೊರ್ತು ಕಟಿಂಗ್ ಮಾಡೊಲ್ಲ. ಕೇಳಿದಾಗ ಕಾಚಾ ಮಾಡಬೇಕು, ಗುಂಡಿ ಹಾಕಬೇಕು, ನೀವೆಲ್ಲಾದ್ರೂ ಹೋಗಿ ಬರೋ ಹಂಗಿದ್ರೆ ಹೋಗಿ ಬನ್ನಿ, 'ಇಸ್ತ್ರಿ ಹಾಕಿರ್‍ತೇನೆ....' ಅಂತ ಹೇಳೋದೆ ಅವರ ಸ್ವಭಾವ...."

"ಹಾಗಿದ್ದರೆ, ಮಗೂನ ಕಳಿಸಿ ಇವತ್ತೆ ತರಿಸಿಬಿಡಿ ಬಟ್ಟೇನಾ"

* * *

"ಎಲ್ಲಾ ಮುಗೀತು. ಇನ್ನು ಅಡಿಗೆಯವನಿಗೇನು ಮಾಡಿದ್ರಿ?"

"ಅಲ್ವೆ ಅಷ್ಟೊಂದು ಜನ ಹೆಂಗಸರು ಬಂದಿರ್‍ತಾರೆ. ಅವರು ಇದ್ಕೊಂಡು ಅಡಿಗೆಯವರು ಬೇಕೆ? ಅವರೆಲ್ಲ ಊರಿನೊಳಗಿನ ಮಾತೆಲ್ಲ ಬಿಟ್ಟು ಒಂದು ಕೈ ಹಾಕಿದರೆ, ಒಂದಲ್ಲ ಎರಡು ಮದುವೆಗೆ ಅಡಿಗೆ ಆಗ್ತದೆ."

"ನೀವು ಹೇಳೋದು ಚೆನ್ನಾಗಿದೆ. ಮದುವೆಗೆ ಬಂದೋರ್‍ನ ಅಡಿಗೇಗೆ ಕರೆಯೋದು....ಅಡಿಗೆ ಮಾಡೋಕೆ ಬರ್‍ತಾರೇನು ಅವರು. ಮೊದಲು ಅಡಿಗೆ ಯವರಿಗೆ ಹೇಳಿ....ಇವತ್ತು ಸಂಜೇಗೆ ಬರ್‍ಲಿ."

"ಅಪ್ಪಣೇ"

"ಹಾಗೇ ತರ್‍ಕಾರಿ, ಊಟದೆಲೆ, ದೊನ್ನೆ ಎಲ್ಲಾ ತಂದುಬಿಡಿ....ಪೇಟೆ ಯಿಂದ ಬರ್‍ತಾ. ಸಂಜೇನೆ ಅವನ್ನೆಲ್ಲಾ ರೆಡಿ ಮಾಡ್ಕೊಬೇಕು....ನಾಳೆ ಬೆಳಿಗ್ಗೆ 'ಟೈಂ' ಇರೊಲ್ಲ."

"ಅಲ್ವೆ ನಿಂ ಭಾವನ್ಗೆ, ನಂ ಭಾವನ್ಗೆ ಕಾಗ್ದ ಬರ್‍ದಿದ್ದೀನೆಲ್ಲಾ ತರ್‍ಕಾರಿ ಬಾಳೆಯೆಲೆ, ಬಾಳೇಕಾಯಿ....ಏನು ಸಿಕ್ಕಿದ್ರೂ ತೆಗೆದುಕೊಂಡು ಬನ್ನಿ ಅಂತ. ಅವರು ಬಂದ ಮೇಲೆ, ಅವರೆಷ್ಟೆಷ್ಟು ತರ್‍ತಾರೇ ಅಂತ ನೋಡ್ಕೊಂಡು ತಂದ್ರಾ ಗೊಲ್ವೇ. ಹೇಗಿದ್ರೂ ನಾಳೆ ಬೆಳಗ್ಗೆ ಅವರು ಬರ್‍ತಾರೆ...."

"ನೀವು ಕಾಗ್ದ ಬರೆದಿದ್ದೀರಿ. ಅವರು ತಂದ್ರು. ಅವರೊಂದು ಪಕ್ಷ ಹಾಗೇ ಬಂದ್ರು ಅಂತ ಇಟ್ಕೊಳ್ಳಿ. ಆಗೇನು ಮಾಡ್ತೀರಿ....ಅದೆಲ್ಲ ಆಗೋದೇ ಇಲ್ಲ. ನೀವು ತರೋದು ತಂದ್ಬಿಡಿ. ಅವರು ತಂದಿದ್ದೂ ಇರ್‍ಲಿ. ಆಗುತ್ತೆ. ಮದುವೆ ಮನೇಲಿ ತರ್‍ಕಾರಿ ಖರ್ಚು ಮಾಡೋಕೆ ಕಣೀ ಕೇಳ್ಬೇಕಾ..."

"ಆಗಲಿ, ಪಟ್ಟೇ ತಾ. ಇವೆಲ್ಲ ತೊಂದ್ರೇನೆ ಬೇಡಾಂತ ನಾನು ಹೇಳಿದ್ದು. ಹೆಣ್ಣೋರ ಮನೇಲೆ ಮಾಡೋಣ ಅಂತ. ಆ ಹಳ್ಳೀಲಿ ಮಾಡೋದು ನಮ್ಮ ಅಂತಸ್ತಿಗೆ ಕಮ್ಮಿ ಅಂತ ಒಂದೇ ಹಠ ಹಿಡಿದೆ. ಈಗ ಒಂದಕ್ಕೆ ನಾಲ್ಕು ಖರ್ಚು. ಇದೆಲ್ಲ ಉಳೀತಿತ್ತು...."

"ಹೌದು ಉಳೀತಿತ್ತು....ಈಗ ಊಟದೆಲೆ . ಅದೂ ತೆಗೆದುಕೊಂಡು ಬನ್ನಿ....ನಿಧಾನವಾಗಿ ಮಾತಾಡೋಣ"

* * *

"ಆರತಕ್ಷತೆಗೆ ಸಂಗೀತ ಕಛೇರಿ ಬೇಡಾ ಅಂತ ಹೇಳ್ತಿದ್ದೆನೆಲ್ಲಾ ಈಗ ಇಟ್ಕೊಬೇಕಾಗಿದೆ."

"ಇದೇನೆ ಹೊಸ ಖರ್ಚು ಹೇಳ್ತಿ. ಹೆದ್ರಿಕೆ ಆಗ್ತಾ ಇದೆ. ನಿನ್ನ ಬೇಡಿಕೆಗಳು ಆಂಜನೇಯನ ಬಾಲದ ಹಾಗೆ ಬೆಳೀತಾ ಇವೆ."

"ನಾನೇನು ಮಾಡ್ಲಿ ಹೇಳಿ....ನನ್ನ ಸ್ನೇಹಿತೆ ...ಮೀನಾಕ್ಷಮ್ಮನವ ರಿಲ್ಲವೆ....ಅವರ ತಂಗೀನ ಮದ್ರಾಸಿಗೆ ಕೊಟ್ಟಿದೆ."

"ಕೊಟ್ಟಿರ್ಲಿ.. .ಆದರೇನೀಗ....? "

"ಹೇಳೋವರ್ಗೂ ಕೇಳ್ರಿ ಸ್ವಲ್ಪ... ಆಕೆ ಸಂಗೀತ ವಿದುಷಿಯಂತೆ. ಅವಳ ಕೈಲಿ ಕಛೇರಿ ಮಾಡಿಸಲೇಬೇಕು ಎಂದು ಮೀನ ಹಠ ಹಿಡಿದಿದ್ದಾಳೆ. 'ನಿನ ಗ್ಯಾಕೆ ಸುಮ್ನಿರು ನಾನು ಅವಳ ಕೈಲಿ ಫಸ್ಟ್‌ಕ್ಲಾಸಾಗಿ ಕಛೇರಿ ಮಾಡಿಸ್ತೇನೆ. ನೀನೇನು ತೊಂದ್ರೆ ಹಚ್ಕೊಬೇಡ. ಬರೀ ಪಕ್ಕವಾದ್ಯಕ್ಕಿಷ್ಟು ಏರ್ಪಾಡು ಮಾಡಿಬಿಡು ಸಾಕು. ಉಳಿದಿದ್ದೆಲ್ಲಾ ನನಗಿರಲಿ' ಎಂದು ಒಂದೇ ಸಮನೆ ಹೇಳ್ತಾ ಇದಾಳೆ. ಅವಳ ಮಾತ್ನ ಹೇಗೆ ತೆಗೆದ್ಹಾಕೋದು. ಅವಳದು ಒಂದು ತರಹ ಜಿಗಣೆ ಸ್ವಭಾವ....ಕೊಂಚ ಪಕ್ಕವಾದ್ಯದವರಿಗೆ ವ್ಯವಸ್ಥೆ ಮಾಡೀಂದ್ರೆ'

"ಪಕ್ಕವಾದ್ಯದವರು ಅಂದ ಕೂಡ್ಲೆ ನನಗೆ ಪಕ್ಕೆಲಬೇ ಹೋಯಿತಲ್ಲೆ.... ಸಂಗೀತಗಾರರನ್ನು ಹಿಡಿದು ತಂದು ಒಪ್ಪಿಸಬಹುದು. ಆದರೆ ಪಕ್ಕವಾದ್ಯ ದವರನ್ನು ಹೊಂದಿಸುವ ಪೀಕಲಾಟ ಎದುರು ಪಕ್ಷದವರಿಗೂ ಬೇಡ. ಬಲು ಕಷ್ಟ. ಆ 'ಘಟ'ದವನು ಬಂದರೆ ಈ 'ಕಂಜರಿ'ಯವನು ಬರೋಲ್ಲ, ಬೇರೆ 'ಘಟ' ತಂದ್ರೆ ನಾನು ಬರೋದು ಎಂದು 'ತಬಲ'ದವನು. ಎಲ್ಲರಿಗೂ ಒಪ್ಪಿಗೆ ಆಗೊ ಸೆಟ್ಟು ಸಿಗಬೇಕಾದರೆ....ಆ ಪರಮಾತ್ಮನೇ ಬಲ್ಲ .. "

"ಹೋಗ್ಲಿ... ನಾನು ಮಿನೂಗೆ ಹೇಳಿಬಿಡ್ತೇನೆ. 'ಪಕ್ಕವಾದ್ಯದೋರ ಪಂಚಾಯಿತಿ ನನಗೆ ಬೇಡಮ್ಮಾ..ನೀನೇ ಅರೇಂಜ್ ಮಾಡ್ಕೊಂಡುಬಿಡು' ಅಂತ. ನೀವು ಲೈಟ್‌ನವನು, ಹೂವಿನವನು, ಹಾಲಿನವನು, ಮೊಸರಿನವನು, ಉತ್ಸವಕ್ಕೆ ಕಾರಿನವನು ಇವರೆಲ್ಲರನ್ನೂ ಇನ್ನೊಂದು ಸಾರಿ ನೋಡಿ, ಅವರಿಗೆ ಜ್ಞಾಪಿಸಿ, ಸಾಧ್ಯವಾದರೆ ಇನ್ನೂ ಇಷ್ಟು ಅಡ್ವಾನ್ಸ್ ಕೊಟ್ಟು, ಹೊತ್ತಿಗೆ ಸರಿ ಯಾಗಿ ಬರೋಹಾಗೆ ತಾಕೀತು ಮಾಡಿ ಬನ್ನಿ."

* * *

ಇಂದು ಮದುವೆ ಆರಂಭ. ಬೆಳಗಿನ ಜಾವ ಐದು ಗಂಟೆಗೆ ಸರಿಯಾಗಿ ಅಪ್ಪಾಜಿ ಗೊತ್ತುಮಾಡಿದ್ದ ವಾಲಗದವರು ಬಂದು ಶಬ್ದ ಮಾಡಿದರು. ವರಾಂಡದಲ್ಲಿ ಅವರಿಗೆ ಚಾಪೆ ಹಾಸಿಕೊಟ್ಟು ವಾಲಗಾರಂಭ ಮಾಡುವಂತೆ ಹೇಳಲಾಯಿತು. ಅವರು 'ಇದಿ ನ್ಯಾಯಮಾ' ಷುರುಮಾಡಿಯೇಬಿಟ್ಟರು. ಇದಾದ ಐದು ನಿಮಿಷಗಳ ತರುವಾಯ ಮತ್ತೊಂದು ವಾಲಗದ ಸೆಟ್ಟು ಬಂದು ವರಾಂಡದ ಇತ್ತಕಡೆ ತಾವೇ ಕುಳಿತುಕೊಂಡುಬಿಟ್ಟಿತು. ತಾವು ಮೂರೂರು ಸುಳ್ಳಪ್ಪನವರು ಕಳುಹಿಸಿದ ಸೆಟ್ಟೆಂದೂ ತಾವೂ ಬಾರಿಸಲೇ ಬೇಕೆಂದು ಇಲ್ಲದಿದ್ದರೆ ಮೂರೂರು ಸುಳ್ಳಪ್ಪನವರು ಸುಮ್ಮನೇ ಬಿಡುವುದಿಲ್ಲ ವೆಂದೂ ಹಟ ತೊಟ್ಟು ವಾದ್ಯಗಳನ್ನು ಊದಲು ಅಣಿಮಾಡಿಕೊಳ್ಳ ತೊಡಗಿ ದರು. ಅಷ್ಟುಹೊತ್ತಿಗೆ ಅಪ್ಪಾಜಿ ಬಂದು "ಆಗಲೇ ಒಂದು ಸೆಟ್ ಬಂದಿದೆ ಯಲ್ಲಾ ?" ಎಂದರು.

"ಅದೆಲ್ಲ ನಮಗೆ ಗೊತ್ತಿಲ್ಲ, ನಾವು ಅಡ್ವಾನ್ಸ್ ತಕ್ಕೊಂಡಿದ್ದೇವೆ, ಬಾರಿಸ ದಿದ್ದರೆ ಮೆಚ್ಚನಾ ಸುಳ್ಳಪ್ಪ" ಅಂದರು.

"ಹಾಗಾದ್ರೆ ನೀವು ಬಾರಿಸಲೇ ಬೇಕೇನು ?"

"ಖಂಡಿತ, ಮಹಾಸ್ವಾಮಿ"

"ಸರಿ, ನೀವೂ ಬಾರಿಸಿ, ಅವರೂ ಬಾರಿಸಲಿ."

"ಯಾರೋ ಅಲ್ಲಿ....ಲೋ, ಮಾದ ಇವರಿಗೂ ಇನ್ನೊಂದು ಚಾಪೆ ತಂದ್ಕೊಡೊ. ಈ ಕಡೆ ಹಾಕೊ" ಎಂದರು.

ಎರಡನೆಯ ಸೆಟ್ ಮೊದಲನೆಯ ಸೆಟ್ಟನ್ನು ಸೋಲಿಸಬೇಕೆಂದು ಪಣ ತೊಟ್ಟು ಬಾರಿಸಲಾರಂಭಿಸಿದರು. ಆ ಡೋಲಿನವನು ಈ ಡೋಲಿನವನನ್ನು

ಡೋಲಿನಿಂದಲೇ ಎದುರು ತಾಕಿದನು. ಅಪ್ಪಾಜಿ ಹಣೆ ಹಣೆ ಚಚ್ಚಿಕೊಂಡರೂ ವಾಲಗವೇನೂ ನಿಲ್ಲಲಿಲ್ಲ. ಜೋಡಿ ವಾಲಗವೆಂದರೇನು, ಅದು ಹೇಗಿರುತ್ತೆ ಎಂಬುದರರ್ಥ ನನಗೆ ಆ ದಿನ ಗೊತ್ತಾಯಿತು. ಮೊದಲನೆಯ ವಾಲಗಕ್ಕೆ ೫೦ ರೂ. ಎರಡನೆಯ ಸೆಟ್ಟಿಗೆ ಕೊನೆಯಪಕ್ಷ ೬೦ ಒಟ್ಟು ವಾಲಗಕ್ಕೇ....೧೧೦ ರೂಪಾಯಿಗಳು.

*　　　　*　　　　*

ಅಪ್ಪಾಜಿ ಸಾಮಾನು ತರಲು ಪೇಟೆಗೆ ಹೋದಾಗ, ಅಮ್ಮ ಯಾರದೊ ಮನೆಗೆ ಕರೆಯೋದಕ್ಕೆ ಅಂತ ಹೋಗಿದ್ದಳು. ಅಮ್ಮ ವಾಪಸು ಬರುವ ಹೊತ್ತಿಗೆ, ಚಪ್ಪರ ಸಿದ್ಧವಾಯಿತು.

ಆ ಚಪ್ಪರ ನೋಡಿದ ಕೂಡಲೇ ಅಮ್ಮ ರೇಗಿಹೋದಳು. "ಇದೇನು ಎತ್ತುಗಳಿಗೆ ಜೋಳದ ಕಡ್ಡಿ ತಿನ್ನಿಸುವುದಕ್ಕೆ ಕಟ್ಟುವ ಅಟ್ಟದ ಹಾಗೆ ಇದೆ ಈ ಚಪ್ಪರ. ಎಲ್ಲರೂ ಬಗ್ಗಿಕೊಂಡೇ ತಿರುಗಾಡಬೇಕಾಗುತ್ತೆ."

"ಅಲ್ಲ ತಾಯಿ.... ಚಪ್ಪರ ಮಟ್ಟಸವಾಗಿ, ಮಾಟವಾಗಿ, ನೀಟಾಗಿರಬೇಕು. ಎತ್ತರವಾಗಿರಬಾರದು ಅಂತ ಹೇಳಿದಿರಿ"

"ತೀರಾ ಎತ್ತರವಾಗಿರಬಾರದೆಂದು ನಾನು ಹೇಳಿದರೆ, ಜನಗಳು ಓಡಾಡದ ಹಾಗೆ ಹಾಕಿ ಅಂತ ಅರ್ಥವೆ ? ಮೊದಲು ಎತ್ತರಿಸಿ ಇದನ್ನು.... ನೋಡೋರಿಗೆ ಅವಲಕ್ಷಣವಾಗಿ ಕಾಣುತ್ತದೆ."

"ಎತ್ತರವಾಗಿ ಹಾಕೋಕೆ ಬೇರೆ ಬೊಂಬುಗಳಿಲ್ಲ. ಎಲ್ಲವನ್ನೂ ಈ ಅಳತೆಗೆ ಸರಿಯಾಗಿ ಕತ್ತರಿಸಿಬಿಟ್ಟಿದೆ, ತಾಯಿ"

ಅಷ್ಟರಲ್ಲಿ ಅಪ್ಪಾಜಿ ಪೇಟೆಯಿಂದ ಬಂದವರು ವಿಚಾರ ತಿಳಿದರು. ಅಮ್ಮಾ ಅವರಿಗೆ ಬೇರೆ ಬೊಂಬು ತರಿಸುವಂತೆ ಒತ್ತಾಯ ಮಾಡಿದಳು.

"ಹೂಂ.... ಎಷ್ಟಪ್ಪಾ ಬೇಕಾಗುತ್ತೆ ಬೊಂಬಿಗೆ ? "

"ಹೂಂ ... ಏನಿಲ್ಲಾ ಸ್ವಾಮಿ.... ಇನ್ನೊಂದಿಪ್ಪತ್ತು ರೂಪಾಯಿ ಅಷ್ಟೆ"

"ಆಗ್ಲೆ ಇಪ್ಪತ್ತು ಕೊಟ್ಟಿದ್ದೆ"

"ಎಷ್ಟೋ ಕೊಟ್ಟು ಕಳುಹಿಸಿರಿ.... ಮೊದಲು ಚಪ್ಪರ ಸರಿಹೋಗಲಿ." ಎಂದಳು ಅಮ್ಮಾ.

ಅಪ್ಪಾಜಿ ಸುಸ್ತುಸಿರು ಬಿಡುತ್ತ ಮತ್ತೆ ಇಪ್ಪತ್ತು ರೂಪಾಯಿ ಕೊಟ್ಟರು. ಅಷ್ಟರಲ್ಲಿ ಅಡಿಗೆಯವನು ಹೊರಟು ನಿಂತಿದಾನೆಂದು ಯಾರೋ ಹೇಳಿದರು. ಅಮ್ಮಾ 'ಯಾಕಂತೆ' ಎಂದು ಅತ್ತಕಡೆ ಬೇಗ ಧಾವಿಸಿದಳು. ಅಪ್ಪಾಜಿ ಅವ ಳನ್ನು ಹಿಂಬಾಲಿಸಿದರು.

ವಿಚಾರಿಸುವಲ್ಲಿ, ತನಗೆ ಅಡಿಗೆಗಾಗಿ ಕೊಟ್ಟದ್ದ ತುಪ್ಪ, ಬೇಳೆ ಇತ್ಯಾದಿ ಗಳನ್ನು ಯಾರೊ ಎತ್ತಿಟ್ಟಿದ್ದಾರೆಂದೂ, ಇದರಿಂದ ಸರಿಯಾಗಿ ಅಡಿಗೆಯಾಗುವು ದಿಲ್ಲವೆಂದೂ ಅದರಿಂದ ತನಗೆ ಕೆಟ್ಟ ಹೆಸರು ಬಂದು, ಪ್ರತಿಷ್ಠೆಗೆ ಕುಂದುಕ ಬರುವುದೆಂದೂ ಅಡಿಗೆಯವನು ಕೂಗಾಡಿದ. ಅಮ್ಮ ಅವನಿಗೆ ಸ್ಟೋರ್ ರೂಂನ ಬೀಗದ ಕೈಯನ್ನೇ ಕೊಟ್ಟು ಏನೇನು ಸಾಮಾನು ಎಷ್ಟೆಷ್ಟ ಬೇಕೊ ಅಷ್ಟನ್ನು ತೆಗೆದುಕೊಂಡು ಅಡಿಗೆ ಚೆನ್ನಾಗಿ ಮಾಡಬೇಕೆಂದು ಹೇಳಿ ಅವನನ್ನು ಸಮಾಧಾನಪಡಿಸಿದಳು. ಅಡಿಗೆಯವನಿಗೆ ಕಾಣದಂತೆ ಸಾಮಾನುಗಳನ್ನು ಎತ್ತಿಟ್ಟದ್ದ ಅಪ್ಪಾಜಿಯೂ ಸಹ ಅವನನ್ನು ಸಮಾಧಾನ ಮಾಡುವುದಕ್ಕಾಗಿ ಇನ್ನೂ ೧೦ ರೂ. ಜಾಸ್ತಿ ಕೊಡ್ತೇನೆ ಅಂತ ಹೇಳಬೇಕಾಯಿತು.

ಆ ದಿನ ಮಧ್ಯಾಹ್ನ ಊಟಕ್ಕೆ ಹೇಳಿದ್ದವರೆಲ್ಲ ಹೇಗೂ ಮದುವೆ ಮನೆ ನಿಧಾನ ಅಂತ ಮೂರು ಘಂಟೆಗೆ ಬಂದರು. ಅಪ್ಪಾಜಿ ಊಟಕ್ಕೆ ಹೇಳಿದ್ದು ಹನ್ನೆರಡು ಗಂಟೆಗೆ. ಮನೆಯಲ್ಲಿಯೇ ಇದ್ದ ನೆಂಟರಿಷ್ಟರಿಗೆ ಅಲ್ಲಿಯ ವರೆಗೆ ಕಾಯಲಾಗಲಿಲ್ಲ. ಅವರಿಗೆ ಹನ್ನೆರಡು ಘಂಟೆಗೆ ಉಪ್ಪಿಟ್ಟು-ಕಾಫಿ ಫಲ ಹಾರ ಮಾಡಿಸಿದ್ದಾಯಿತು. ಅಮ್ಮ ಮೊದಲೇ ಹೇಳಿದ್ದರು, ಮದುವೆ ಮನೆ ಯಲ್ಲಿ ಊಟಕ್ಕಿಂತ ಉಪ್ಪಿಟ್ಟು ಮುಖ್ಯ. ಧಾರಾಮುಹೂರ್ತಕ್ಕಿಂತ ಕಾಫಿ ಮುಹೂರ್ತ ಮುಖ್ಯ, ನಾಗೋಲೆಗಿಂತ ಇಸ್ಪೇಟು ಆಟ ಮುಖ್ಯ ಅಂತ. ಆದರೆ ಅಪ್ಪಾಜಿ ಅದನ್ನು ಮನಸ್ಸಿಗೆ ಹಾಕಿಕೊಳ್ಳದೆ, ಬೆಳಗಿನ ಉಪಾಹಾರ ಉಳಿಸಲು ಹೋಗಿ, 'ಈಗ ಗೊತ್ತಾಯಿತೊ ನಿಮಗೆ, ನಾನು ಹೇಳಿದ್ದು' ಎಂದು ಅಮ್ಮನ ಕೈಲಿ ಗೊಣಗಾಡಿಸಿಕೊಂಡರು.

ಸಂಜೆ ಕಾರಿನವರು ತಡವಾಗಿ ಬಂದು ವರನನ್ನು ಎದುರುಗೊಂಡು ಬರು ವುದು ಒಹಳ ನಿಧಾನವಾಯಿತು. ಅದರ ಜೊತೆಗೆ, ನಾವೊಂದು ದೇವಸ್ಥಾನ ಹೇಳಿದ್ದಕ್ಕೆ ಅವರೊಂದು ದೇವಸ್ಥಾನ ಹೇಳಿ, ಕೊನೆಗೆ ಊರ ಹೊರಗೆ ಆರು ಮೈಲಿ ದೂರದ ಯಾರಿಗೂ ಸೇರದ ದೇವಸ್ಥಾನದಿಂದ ವರನನ್ನು ಎದುರು

ಗೊಂಡು ಬಂದುದಾಯಿತು. ಕಲಶ, ಮಂಗಳದ್ರವ್ಯಗಳ ತಟ್ಟೆ ಹಿಡಿದುಕೊಂಡು ಬರುತ್ತಿದ್ದವರೆಲ್ಲ ರಸ್ತೆಯುದ್ದಕ್ಕೂ ತೂಗಡಿಸಿದ್ದೂ ತೂಗಡಿಸಿದ್ದೆ. ಆಕಳಿಸಿದ್ದೂ ಆಕಳಿಸಿದ್ದೆ. ಲೈಟಿನವನನ್ನು ನಾವೇ ಹೋಗಿ ಕರೆದು ತಂದಿದ್ದಾಯಿತು. ಅವನ ಹತ್ತಿರ ಸಾಕಷ್ಟು ಹುಡುಗರಿಲ್ಲದೆ ಹೋದ್ದರಿಂದ ನಮ್ಮಲ್ಲಿದ್ದ ಹುಡುಗರನ್ನೆ ಪುಸಲಾಯಿಸಿ ಲೈಟ್ ಹಿಡಿಸಿದ್ದಾಯಿತು. ಮಕ್ಕಳು ಮರಿಯೆಲ್ಲ ರಸ್ತೆಯಲ್ಲೇ ಮಲಗತೊಡಗಿದ್ದರಿಂದ ಅವರ ತಾಯಂದಿರು ಎರಡೆರಡು ಬಿಗಿಯುತ್ತಲೇ ಅವು ರೋದಿಸತೊಡಗಿದುವು. ಅಲ್ಲಿಗೆ ಮೂರು 'ಸೆಟ್' ವಾಲಗಗಳೂ ಏಕಕಾಲದಲ್ಲಿ ಬಾರಿಸಲಾಯಿತು. ಮಕ್ಕಳಿದ್ದ ಹೆಂಗಸರಿಗೆ, ಬೇಜಾರಾಗಿ ಅವರು 'ಥೂ ಈ ಹಾಳು ಮಕ್ಕಳು ಯಾಕಾದ್ರೂ ಹುಟ್ಟುತ್ತವೊ' ಎಂದು ರೇಗಾಡುತ್ತಿದ್ದರು. ಅಂತೂ ವರನನ್ನು ಎದುರುಗೊಂಡು ಬಂದುದಾಯಿತು.

* * *

ಮಾರನೆಯ ದಿನ ಧಾರೆ ಮುಹೂರ್ತ. ವರನನ್ನು 'ಕಾಶೀಯಾತ್ರೆ'ಗೆ ಕಳುಹಿಸುವಾಗ 'ಬಾಸಿಗ' ತಂದಿಲ್ಲದ್ದು ಪತ್ತೆಯಾಯಿತು. ಯಾರನ್ನೊ 'ಓಡಗಳುಹಿಸಿ' ಒಂದಕ್ಕೆ ನಾಲ್ಕು ದುಡ್ಡುಕೊಟ್ಟು ತರಿಸಲಾಯಿತು. ಟೈಲರ್ ಬರೀ ಕೋಟು ಮಾತ್ರ ಕೊಟ್ಟು, ಸಾಯಂಕಾಲಕ್ಕೆ ಆರತಕ್ಷತೆಯ ಹೊತ್ತಿಗೆ ಷರಾಯಿ ಕೊಡುವುದಾಗಿ ಹೇಳಿದ. 'ತಾಳಿ' ತರುವುದು ಕೊಂಚ ನಿಧಾನವೇ ಆಯಿತು. ಕಾಶೀಯಾತ್ರೆಗೆ ಹೋಗುವಾಗ ತಂದಿಟ್ಟಿದ್ದ ಗಂಧದ ಕೋಲು ಸಿಗದೆ, ಕೊನೆಗೆ ಬೆತ್ತದ ಕೋಲೆ ಕೊಡಬೇಕಾಯಿತು. ಇದನ್ನು ಕಂಡ ಅಮ್ಮ ಹೆಂಗಸರ ಮಧ್ಯದಲ್ಲೇ ಉರಿದುಬಿದ್ದಳು.

ಅಂತೂ ಧಾರೆ ಮುಹೂರ್ತ ಆದೊಡನೆ ಬೆಳಗಿನಿಂದ ತಡೆದಿದ್ದ ಮಾತು ಕತೆಗಳು ಮತ್ತು ಜಗಳಗಳು ನಿಧಾನವಾಗಿ ಆರಂಭವಾದುವು. ಹಲವನ್ನು ಅಮ್ಮ 'ರಾಜಿ' ಮಾಡಿಸಿದಳು. ಉಳಿದವನ್ನು ಅವರವರ ಮರ್ಜಿಗೆ ಬಿಟ್ಟು ಬಿಡಲಾಯಿತು. ಊಟ ಮುಗಿದ ಮೇಲೆ ಒಂದು ಟನ್ ಹಪ್ಪಳದ ಪುಡಿಯನ್ನು ಗುಡಿಸಿ ಹಾಕಲಾಯಿತು. ಇದನ್ನು ನೋಡಿ.ಅಪ್ಪಾಜಿ ರೇಗಿಬಿದ್ದರು. 'ಹಪ್ಪಳ ಕುಟ್ಟೋದ್ರ ಬದಲು ತಟ್ಟೆಗಳನ್ನು ಕುಟ್ರಿ' ಅಂದರು. ಅಮ್ಮ ಬಂದು ಸಮಾಧಾನ ಮಾಡಿದಳು.

ಸಂಜೆ ಆರತಕ್ಷತೆ ಚೆನ್ನಾಗಿ ನಡೆಯಿತು. ಮೀನಾಕ್ಷಮ್ಮನವರೇ ಪಕ್ಕ ವಾದ್ಯದವರನ್ನು ಕರೆದುಕೊಂಡು ಬಂದಿದ್ದರು. ಅವರ ತಂಗಿಯೇ ಕಛೇರಿ ಮಾಡಿದರು. ಆದರೆ ಪಾಪ, ಅವಳು ಹಾಡುವಾಗ ಅರ್ಧದಲ್ಲೇ ದವಡೆ ಉಳುಕಿ, ಗಂಟಲು ಕೆಟ್ಟುಹೋಯಿತು. ಆಗ ಯಾರೊ ಹುಡುಗಿ ಮುಂದೆ ಬಂದು ನಾಲ್ಕು ಕೀರ್ತನೆಗಳನ್ನು ಹಾಡಿದಳು. ಬಹಳ ಚೆನ್ನಾಗಿತ್ತು. ಇದನ್ನ ನೋಡಿದ ಮೀನಾಕ್ಷಮ್ಮ, ತಂಗಿಯನ್ನು ಹಿಂದಕ್ಕೆ ಹಾಕಿ, ಅವರೇ ಎಂಟು ಹಾಡನ್ನು ಹಾಡಿ ಮುಗಿಸುವವರೆಗೂ ಬಿಡಲಿಲ್ಲ. ಅವರು ಹಾಡಿದ್ದರಿಂದ ಆದ ಒಂದು ಅನುಕೂಲವೆಂದರೆ ಆರತಕ್ಷತೆಗೆ ಬಂದವರು ತಾಂಬೂಲ ಕೈಗೆ ಬಿದ್ದ ತಕ್ಷಣ ಪರಾರಿಯಾಗುತ್ತಿದ್ದರು. ಸ್ಥಳಾಭಾವಕ್ಕೆ ಎಳ್ಳಷ್ಟೂ ಅವಕಾಶವಾಗ ಲಿಲ್ಲ.

ಇನ್ನೇನು ಆರತಕ್ಷತೆ ಮುಗಿಯುತ್ತದೆ ಎನ್ನುವಷ್ಟರಲ್ಲಿ .... ಅಮ್ಮನ ಸಂಗೀತ ಮೇಷ್ಟ್ರಂತೆ, ಮದ್ರಾಸಿನಲ್ಲಿ ಯಾವುದೊ ಸ್ಟುಡಿಯೊದಲ್ಲಿ ಸಂಗೀತ ಗೋಷ್ಠಿಯಲ್ಲಿದ್ದಾರಂತೆ. ಅವರ ಶಿಷ್ಯಕೋಟಿಗಳಲ್ಲೊಬ್ಬರು ಅಮ್ಮನ ಮನೆ ಯಲ್ಲಿ ಅವಳ ಹಿರಿಯ ಮಗನ ಮದುವೆ ಬಹಳ ಅದ್ಧೂರಿಯಿಂದ ನಡೆಯುತ್ತಿದೆ ಎಂದು ಹೇಳಿದರಂತೆ. ಆ ಕೂಡಲೆ ಇಲ್ಲಿಗೆ ಹೊರಟುಬಂದರಂತೆ ; ಅವರು ತಮ್ಮ ಶಿಷ್ಯಳ ಹಿರೀ ಸೊಸೇನ ನೋಡಬೇಕೂಂತ ಬಂದುಬಿಟ್ಟರಂತೆ.

ಅವರು ಬಂದವರೇ ಮೀನಾಕ್ಷಮ್ಮನವರ ಹಾಗೂ ಅವರ ತಂಗಿಯ ಹಾಡುಗಾರಿಕೆಯನ್ನು ಕೇಳಿ ಅದು ಸಂಗೀತಗಾರರಿಗೂ, ಸಂಗೀತಕ್ಕೂ ಏಕ ಕಾಲದಲ್ಲಿ ಅವಮಾನವಾಗುತ್ತಿರುವುದನ್ನು ನೋಡಲಾರದೆ ತಾವು ಈ ಸಭೆ ಯಲ್ಲಿ ಹಾಡಲೇಬೇಕು. ತಮ್ಮ ಪಾಂಡಿತ್ಯ ಪ್ರದರ್ಶನದಿಂದ ಸಂಗೀತಕ್ಕೂ ಸಂಗೀತಗಾರರಿಗೂ ಕಳೆದುಹೋಗಿದ್ದ ಮಾನವನ್ನು ವಾಪಸು ತರಬೇಕೆಂದು 'ಆ' ಎಂದು ಜೇಬಿನಿಂದ ಮೆಣಸಿರಕಾಳು ತೆಗೆದು ಬಾಯಿಗೆ ಹಾಕಿಕೊಂಡು 'ರಿಭಷ' ಧ್ವನಿಯಲ್ಲಿ ರಾಗ ತೆಗೆದು ತೊಡೆ ತಟ್ಟಿದರು. ಆಗ ಹತ್ತು ಗಂಟೆ ಯಾಗಿದೆಯೆಂದೂ, ಸಂಗೀತ ನಿಲ್ಲಿಸಬೇಕೆಂದೂ ಅಪ್ಪಾಜಿ ಮಾಡಿದ ಮನವಿ ಗಳು ಅರಣ್ಯರೋದನವಾಯಿತು. ಆಗ ಅಮ್ಮ ಮುಂದೆ ಬಂದು ನಾಳೆ, ನಾಗೋಲೆಯಾದಮೇಲೆ ಮೇಷ್ಟರಿಗಾಗಿಯೇ ಕಛೇರಿ ಏರ್ಪಡಿಸುವುದಾಗಿ ಭರ

ವಸೆ ಕೊಟ್ಟಮೇಲೆ ಅವರು ತಮ್ಮ 'ಫಲಕು'ಗಳನ್ನು ನಿಲ್ಲಿಸಿ ತತ್ಪೂರ್ತ ಮಂಗಳ ಹಾಡಿದರು.

*　　　*　　　*

ಮೂರನೆಯ ದಿನ ನಾಗೋಲಿ. ನಾಗೋಲಿಯಾದಮೇಲೆ ನೆಂಟರಿಷ್ಟರ ಸಾಗೋಲಿ. ಅದರಲ್ಲಿ ಹೆಂಗಸರ ಕೆಲಸವೇ ಹೆಚ್ಚಾಗಿದ್ದುದರಿಂದ, ಗಂಡಸ ರೆಲ್ಲರೂ ಇಸ್ಪೇಟಿಗೆ ಕುಳಿತರು. ಅವರಿಗೆ ಕಾಫಿ ಸಪ್ಲೈ ಮಾಡುವುದೇ ಇಬ್ಬರಿಗೆ ಕೆಲಸವಾಯಿತು.

ಮೇಸ್ಟರು ಮಾತ್ರ ತಮ್ಮ ಸಂಗೀತ ಕಛೇರಿಗಾಗಿ 'ಜೀವಕ್ಕೆ ಜೀರಿಗೆ' ಅರೆದರು. ಬರಿ ಸಂಗೀತ ಕಛೇರಿ ಹೇಗೆ ಇಡೋದು ಅಂತ ಆರತಕ್ಷತೆಯನ್ನು ಇಟ್ಟುಕೊಳ್ಳಲಾಯಿತು. ಗಂಡಸರಿಗೆ ಹೇಳಿದರೆ ಗಲಾಟೆಯಾಗುತ್ತೆ ಅಂತ ಬರೀ ಹೆಂಗಸರಿಗೆ 'ಮಂಗಳದ್ರವ್ಯ' ತಗೊಂಡು ಹೋಗಬೇಕೆಂಬ ಆಹ್ವಾನ ವನ್ನು ಮುದ್ರಿಸಿ ಹಂಚಲಾಯಿತು. ಆದರೆ ಅಪ್ಪಾಜಿಯ ಅದೃಷ್ಟಕ್ಕೆ ಸರಿ ಯಾಗಿ, ಹೆಂಗಸರು ತಾವು ಒಬ್ಬರೇ ಬರಲಾರದೆ ತಮ್ಮ ತಮ್ಮ ಗಂಡಸರನ್ನೂ ಮಕ್ಕಳನ್ನೂ ವೈಗಾವಲಿಗಾಗಿ ಕರೆತಂದಿದ್ದರು. ಅವರಿಗೆಲ್ಲ ಪ್ರತ್ಯೇಕ ಸ್ಥಳ ಮಾಡಿ ಕೂಡಿಸಬೇಕಾಯಿತು; ತೆಂಗಿನಕಾಯಿ ಇಲ್ಲದಿದ್ದರಿಂದ ಅವರಿಗೆಲ್ಲ ಬಾಳೇ ಹಣ್ಣನ್ನೇ ಕೊಡಬೇಕಾಗಿ ಬಂತು. ಹಲವು ಗಂಡಸರು ಅದಕ್ಕೂ 'ನನಗೆ ಬರಲಿಲ್ಲ....ತನಗೆ ಬರಲಿಲ್ಲ' ಅಂತ ಜಗಳ ಆಡ್ತಾ ಇದ್ರು.

ಸಂಗೀತ ಮೇಷ್ಟ್ರು ಕಛೇರಿಯೇನೊ ಅವ್ಯಾಹತವಾಗಿ ನಡೆಯಿತು. 'ಅವರು ಹಾಡಿದ್ದಕ್ಕಾಗಿ ಸಂಭಾವನೆ ಕೊಡದಿದ್ದರೆ ಚೆನ್ನಾಗಿರೋದಿಲ್ಲ. ಅದೂ ಅಲ್ಲದೆ ಅವರು ನನಗೆ ಮೇಷ್ಟ್ರಾಗಿದ್ದೋರು' ಎಂದು ಅಮ್ಮ ವಾದಿಸಿದಳು. ಅವರಿಗೆ ನೂರು ರೂಪಾಯಿ, ಒಂದು ಶಲ್ಯ ಇಷ್ಟನ್ನು ಕೊಟ್ಟು ಮರ್ಯಾದೆ ಮಾಡ ಲಾಯಿತು.

ಅಂತೂ ಮದುವೆ ಮುಗಿದರೂ ತಾಂಬೂಲಾರ್ಥಿಗಳು ತಪ್ಪಲಿಲ್ಲ. ನಾನು ಆ ಆಫೀಸು, ಈ ಆಫೀಸು, ನಾನು ಅಗಸ, ನಾನು ಟೈಲರ್, ನಾನು ಅಕ್ಕ ಸಾಲಿಗ, ನಾನು ಬಳೆಗಾರ....ಅಂದುಕೊಂಡು ಒಂದೇಸಮನೆ 'ಇನಾಮು' ಕೇಳ ತೊಡಗಿದರು.

ಈ ಇನಾಮುಗಳ ಕಾಟ ತಪ್ಪಿಸಿಕೊಂಡು ಒಟ್ಟು ಲೆಖ್ಖ ಹಾಕಿದಾಗ ಅಪ್ಪಾಜಿಗೆ ಹತ್ತುಸಾವಿರ ಕೈಬಿಟ್ಟಿತ್ತಂತೆ. ಅಂದಾಜು ಹಾಕಿದ್ದು ಐದು ಸಾವಿರ. ಏನಿಲ್ಲ ಎತ್ತಿಲ್ಲ ಹತ್ತುಸಾವಿರವಾಗಿದೆ. ಇನ್ಯಾವುದೇ ವ್ಯವಹಾರಕ್ಕೆ ಈ ಹಣ ಹಾಕಿದ್ದರೆ ಬಡ್ಡಿ ಬರುತ್ತಿತ್ತು, ಅಸಲು ಭದ್ರವಾಗಿರುತ್ತಿತ್ತು. ಆದ್ರೆ ಮದುವೆಗೆ ಹಾಕಿದ ದುಡ್ಡಿಗೆ ಬಡ್ಡಿ ಬರೋದಿರಲಿ, ಅಸಲೇ ಪತ್ತೆ ಇರುವುದಿಲ್ಲ ಎಂದು ಅಪ್ಪಾಜಿ ಯೋಚಿಸುತ್ತಿದ್ದರು.

ಇಷ್ಟೊಂದು ಅದ್ಧೂರಿಯಾಗಿ ಮಾಡಿದ್ರೂ, ಇನ್ನೂ ಅದ್ಧೂರಿಯಾಗಿ ಮಾಡಬೇಕಾಗಿತ್ತು ಮದುವೆ ಅಂತ ಅಮ್ಮನ ಯೋಚನೆ. ಅವರ ಮದ್ವೇಲಿ ಹಾಗೆ ಮಾಡಿದ್ರು, ಇವರ ಮದುವೇಲಿ ಹೀಗೆ ಮಾಡಿದ್ರು, ನಮ್ಮ ಮದ್ವೇಲಿ ಅವನ್ನ ಮಾಡೋಕಾಗ್ಲಿಲ್ಲ ಎಂದು ಪೇಚಾಡುತ್ತಿದ್ದಳು.

ಅದನ್ನ ನಮ್ಮಜ್ಜಿ ನೋಡಿ 'ಅಯ್ಯೋ ಬಿಡೆ, ಮದುವೆ ಮಾಡಿ, ಮನೆ ಕಟ್ಟಿ ಯಾರು ಸೈ ಅನ್ನಿಸ್ಕೊಂಡವ್ರೆ ; ಅದಕ್ಕೇ ನಮ್ಮ ಪೂರ್ವಿಕರು ಅನ್ನೋದು, ಮದುವೆ ಮಾಡಿ ನೋಡು ಮನೆ ಕಟ್ಟಿ ನೋಡು ಅಂತ!' ಎಂದಂದು ಸಮಾಧಾನಿಸಿದರು.

# ಸಂಗೀತಾಭ್ಯಾಸಿ !

ಸಂಗೀತ ಸಾಮವೇದವೆಂದು ಸಾವಿರಾರು ವರ್ಷಗಳಿಂದ ಸ್ಥಿರಗೊಂಡಿದೆ. ಆದರೆ ಅದನ್ನು 'ಸಾಮವೇದ' ಅನ್ನುವುದಕ್ಕಿಂತ 'ಗರಡಿ ಸಾಮುವೇದ' ಎಂದರೆ ಹೆಚ್ಚು ಒಪ್ಪುತ್ತೆ. ಏಕೆಂದರೆ ಸಂಗೀತಾಭ್ಯಾಸಿ, ಗರಡಿ ಸಾಧಕ ಇಬ್ಬರೂ ಒಂದೇ ಜಾತಿಗೆ ಸೇರಿದವರು. ಇಬ್ಬರೂ ಸಾಧನೆ ಮಾಡಿ ಮಾಡಿ ಸಿದ್ಧಿಪಡೆಯ ಬೇಕು. ಇಬ್ಬರ ಕ್ರಿಯಾಕ್ಷೇತ್ರವೂ ಒಂದೇ—ಜನ ಸಾಮಾನ್ಯರ ನಡುವೆ, ತಮ್ಮ ಪಾಂಡಿತ್ಯ, ಪ್ರತಿಭೆ ಪ್ರದರ್ಶಿಸಿ ಅವರ ಮೆಚ್ಚುಗೆ ಗಳಿಸಿ, ಪ್ರೋತ್ಸಾಹ ಪಡೆದುಕೊಳ್ಳಬೇಕು. ಒಬ್ಬನು 'ಪಟ್ಟು'ಗಳಿಂದ ಜನರನ್ನು ಆಕರ್ಷಿಸಿದರೆ, ಮತ್ತೊಬ್ಬ 'ಮಟ್ಟು'ಗಳಿಂದ ಜನರ ತಲೆ ತೂಗಿಸಬೇಕು. ಒಬ್ಬನದು 'ಕಸ ರತ್ತು', ಮತ್ತೊಬ್ಬನದು 'ಕಛೇರಿ' !

ಒಬ್ಬ ಶರೀರ ಸಂಪತ್ತಿಗಾಗಿ ಹಾಲು, ಹಣ್ಣು, ಬಾದಾಮಿ, ಖರ್ಜೂರ ಹಲ್ವಾದಿ ಪುಷ್ಟಿಕರ ಪದಾರ್ಥಗಳನ್ನು ಮೆಲ್ಲುತ್ತಾನೆ. ಕ್ಲುಪ್ತಕಾಲದಲ್ಲಿ ತಲೆಯ ಮೇಲೆ ತಲೆ ಬಿದ್ದರೂ ತನ್ನ ತಲೆಗೆ ಮಾತ್ರ ಎಣ್ಣೆ ತಪ್ಪಿಸುವುದಿಲ್ಲ. ಗರಡಿ ಸಾಧಕನಿಗೆ ಶರೀರ ಸಂಪತ್ತಾದರೆ, ಸಂಗೀತಗಾರನಿಗೆ ಶಾರೀರ ಸಂಪತ್ತೇ ಸರ್ವಸ್ವ. ಆತನಿಗೆ ಬೆಲೆ ಕಟ್ಟುವುದು, ಬೆಲೆ ಬರುವುದು, ಬೆಲೆ ಹೋಗುವುದು ಶಾರೀರದಿಂದಲೇ ; ಶಾರೀರವಿಲ್ಲದ ಸಂಗೀತಗಾರ ಬೇಡಿಕೆಯಿಲ್ಲದ ಮಾಲಿನಂತೆ!

ಸಂಗೀತಾಭ್ಯಾಸಿಯೂ ತನ್ನ ಶಾರೀರ ಸಂಪತ್ತಿಗಾಗಿ ಪುಷ್ಕಳ ಪದಾರ್ಥ ಗಳನ್ನೇ ಸ್ವೀಕರಿಸುತ್ತಾನೆ. ಗಾಣದ ತುಪ್ಪ (?) ಕಂಡರೆ ಗಾವುದ ದೂರ ನಿಲ್ಲುತ್ತಾನೆ. ಎಣ್ಣೆ ಕಂಡಕೂಡಲೆ ಕಣ್ಣುಮುಚ್ಚಿಕೊಳ್ಳುತ್ತಾನೆ. ವನಸ್ಪತಿಯ ವಾಸನೆಗೇ ವಾಂತಿಮಾಡಿಕೊಳ್ಳುತ್ತಾನೆ. ಶಾರೀರ ಕೆಡಿಸುವ ಸರ್ವ ಸಾಮಗ್ರಿ ಗಳಿಗೂ ಇವನ ಬಹಿಷ್ಕಾರ. ಅಭ್ಯಂಜನವೆಂದರೆ ಇವನೂ 'ಅಡ್ಡಿಯಿಲ್ಲ' ವೆನ್ನುತ್ತಾನೆ.

ಒಬ್ಬ ಗರಡಿ ಸಾಧಕನಿಗೂ ಮತ್ತೊಬ್ಬ ಗರಡಿ ಸಾಧಕನಿಗೂ 'ರೆವೆ-ರೆವೆ' ಆಗುವುದಿಲ್ಲ. ತಾನೇ ನಿಪುಣನೆಂದೂ, ತನ್ನ ಪಟ್ಟೇ ಪಟ್ಟೆಂದೂ, ಮತ್ತೆಲ್ಲ

ರದೂ ಅಲ್ಲವೆಂದೂ ಅವನ ತೀರ್ಮಾನ. ಸಂಗೀತಾಭ್ಯಾಸಿಯೂ ಅದೇ ರೀತಿ, "ಬಿಡೊ, ಅವನಿಗೇನು ಬರುತ್ತೆ; ನಾನು ಕಾಣನೇ ಅವನ ಪಾಂಡಿತ್ಯವನ್ನ; ನನ್ನ ರಾಗಕ್ಕೆ ಅವನು ತಾಳ ಹಾಕಬೇಕಾದರೆ ಅವನು 'ಪಾತಾಳಯಾತ್ರೆ' ಮಾಡಿಕೊಂಡು ಬರಬೇಕು; ನನ್ನ ಕಂಠದಲ್ಲಿ 'ಕಲ್ಯಾಣಿ' ರಾಗ ಬಂದಂತೆ ಬರಬೇಕಾದರೆ ಅವನು 'ಕಲ್ಯಾಣಿ'ಗೆ ಬಿದ್ದರೂ ಸಾಧ್ಯವಿಲ್ಲ!" —ಎಂದು ಹಿಯ್ಯಾಳಿಸುತ್ತಾನೆ.

ಗರಡಿ ಸಾಧಕ ಸಂಜೆ, ಮುಂಜಾನೆ 'ಸಾಮು' ಮಾಡುತ್ತಾನೆ. ಅದ ರಂತೆ ಸಂಗೀತಾಭ್ಯಾಸಿಯೂ ಅದೇ ಕಾಲವನ್ನು ಸಲೀಸುಮಾಡಿಕೊಂಡಿದ್ದಾನೆ. ಒಬ್ಬನು ಮನೆ-ಮಾರು ಬಿಟ್ಟು ಬಂದು ಮೊಣಕಾಲು ಮಡಿಸಿ ಮಣ್ಣಿನಲ್ಲಿ ಹೊರ ಳಾಡಿ, ಕೆಮ್ಮಣ್ಣು ಕಣ್ಣಿಗೊತ್ತಿಕೊಳ್ಳುತ್ತಾನೆ; ಬದುಕಿದ್ದಾಗಲೇ ಮೈಮೇಲೆ ಮಣ್ಣೆರಚಿಕೊಳ್ಳುತ್ತಾನೆ. ಸಂಗೀತಾಭ್ಯಾಸಿಯೂ ಕಡಮೆಯೇನಿಲ್ಲ. ಮನೆ ಮಾರು ಕಿತ್ತುಹೋಗುವಂತೆ, ಮೂರು ಮನೆ ಆಚೆಗೆ ಕೇಳುವಂತೆ ಕಿರಚಿ, ಸೂರು ಹಾರುವಂತೆ ಅರಚುತ್ತಾನೆ.

ಗರಡಿ ಸಾಧಕ ಸಾಧನೆಗಾಗಿ ಏರ್ಪಡಿಸಿರುವ 'ಗರಡಿ'ಯಲ್ಲಿ ಮಾತ್ರ ಗಲಾಟೆ ಮಾಡಿದರೆ, ಸಂಗೀತಾಭ್ಯಾಸಿ ಇದ್ದ ಜಾಗದಲ್ಲೇ ಸಾಧನೆ ಆರಂಭಿಸಿ ಸುತ್ತು-ಮುತ್ತಿನವರನ್ನು ಸಂಕಟಕ್ಕೆ ಸಿಕ್ಕಿಸುತ್ತಾನೆ.

ಸಂಗೀತಾಭ್ಯಾಸಿ ತನ್ನ ಶಾರೀರ ಪಳಗಿಸಿಕೊಳ್ಳುವ ರಭಸದಲ್ಲಿ ನೆರೆ ಹೊರೆಗೆ ಕೊಡುವ ಉಪದ್ರವ ಅಷ್ಟಿಷ್ಟಲ್ಲ. ಮೊದಲೇ ನೆರೆ, ಯಾವಾಗಲೂ, ಎಲ್ಲರಿಗೂ ಹೊರೆ. ಅದರಿಂದ ನಮ್ಮ ಶಬ್ದತಜ್ಞರು ನೆರೆಯ ಜೊತೆಗೇ ಹೊರೆ ಯನ್ನೂ ಸೇರಿಸಿಬಿಟ್ಟು 'ನೆರೆಹೊರೆ' ಒಂದೇ ಶಬ್ದವೆನ್ನುವಂತೆ ಮಾಡಿರೋದು!

ಸಂಗೀತಾಭ್ಯಾಸಿಗಳ ಉಪದ್ರವ ಮುಖ್ಯವಾಗಿ ಹಾರ್ಮೋನಿಯಂ ಅಥವಾ ಹಾಡುಗಾರಿಕೆಗಳ ಮೂಲಕ ನಡೆಯುತ್ತದೆ. ಹಲವು ವೇಳೆಗಳಲ್ಲಿ ಡೋಲು, ಮೃದಂಗಗಳ ದ್ವಾರಾ ಈ ಉಪದ್ರವ ಲಭಿಸಬಹುದು. ಕೆಲವುವೇಳೆ ಕೊಳ ಲಿನ ಕಾಟದಿಂದ ಗಂಟು ಬೀಳಬಹುದು. ಮತ್ತೆ ಕೆಲವುವೇಳೆ ವೀಣೆ, ಪಿಟೀಲು ಗಳ ಪೀಕಲಾಟವಾಗಬಹುದು. ಆದರೆ, ನಮಗೆ ಸಿಕ್ಕಿರುವ ಮನೆ, ಮೇಲೆ ಹೇಳಿದ ರೀತಿಯ ಕೆಲವು ಸಂಗೀತಾಭ್ಯಾಸಿಗಳಿಗೆ ಏಕಕಾಲದಲ್ಲಿ 'ನೆರೆಹೊರೆ' ಯಾಗಿರುವ 'ದುರವಕಾಶ'ವನ್ನು ಪಡೆದಿದೆ.

ಎಡಪಕ್ಕದಲ್ಲಿ ಬೈಗೂ ಬೆಳಗೂ ಹಾರ್ಮೋನಿಯಂ. ಈ ಪಕ್ಕದ ಮನೆಯ ಹುಡುಗಿ ಪಕ್ಕವಾದ್ಯದೊಂದಿಗೆ ಪಾಠಕ್ಕೆ ಕುಳಿತರೆ ನಮ್ಮ ಕಿವಿಗಳ ಪಾಡು ಕೃಷ್ಣಪರಮಾತ್ಮನಿಗೇ ಪ್ರೀತಿ! ಹುಡುಗಿ ತಾನು ಹೆಚ್ಚೋ, ಹಾರ್ಮೋನಿಯಂ ಹೆಚ್ಚೋ ಎಂದು ಅರಚುತ್ತಾಳೆ. ಕೆಲವುಕಾಲ ಪೂರ್ಣ ಗಂಟಲಿನಿಂದಲೂ, ಕೆಲಕಾಲ ಅರ್ಧ ಗಂಟಲಿನಿಂದಲೂ, ಮತ್ತೆ ಕ್ಷಣಕಾಲ ಮೂಗು-ಗಂಟಲುಗಳೆರಡ ರಿಂದಲೂ ಆಗಾಗ ಮೂಗಿನಿಂದಲೂ ಹಾಡಿ ನಮ್ಮನ್ನು ಕಾಡುತ್ತಾಳೆ. ನಾವು ಆ ಮನೆಗೆ ಹೋದ ಹೊಸದರಲ್ಲಿ 'ಕೊಂಚ ಮೆತ್ತಗೆ ಹೇಳಿಕೊಳ್ಳುವಂತೆ' ಸಲಹೆ ಯಿತ್ತಿದ್ದಕ್ಕೆ ಆಕೆ ಹಾರ್ಮೋನಿಯಂ 'ಸಪ್ತಮ ಸ್ವರ'ಕ್ಕೇರಿಸಿಕೊಂಡು ಬಾರಿಸ ಲಾರಂಭಿಸಿದಳು.

ಇನ್ನೊಂದು ಆಶ್ಚರ್ಯವೆಂದರೆ, ಆ ಹುಡುಗಿ, ನಾವು ಆ ಮನೆಗೆ ಹೋದಾಗಿ ನಿಂದಲೂ ಅದೇ ರಾಗ ಹಾಡುತ್ತಿರುವುದು. ಹಲವಾರು ವರ್ಷಗಳಿಂದಲೂ 'ಅದೇ ರಾಗ' ಹಾಡುತ್ತಿರುವಳೆಂದೂ, ಮದುವೆಯಾಗುವವರೆಗೂ ಅದೇ ರಾಗ ಹಾಡುತ್ತಿದ್ದು, ಆ ಮೇಲೆ ತೆಪ್ಪಗಾಗುವಳೆಂದೂ ನಮ್ಮ ಬೀದಿಯಲ್ಲೇ ಮೊದಲಿ ನಿಂದ ವಾಸಿಸುತ್ತಿರುವವರೊಬ್ಬರು ತಿಳಿಸಿದರು. ನಾವು ಆಕೆ ತೆಪ್ಪಗಾಗುವ 'ಸುದಿನ'ವನ್ನು ಎದುರು ನೋಡುತ್ತಿದ್ದೇವೆ!

ಸಾಧಾರಣವಾಗಿ ಪ್ರಾತಃಕಾಲ ಒಂದು ಗಂಟೆ, ಸಂಜೆ ಒಂದು ಗಂಟೆ ಅಭ್ಯಾಸ ಮಾಡಿಕೊಳ್ಳುವ ಈ ಹುಡುಗಿ ಒಂದೊಂದು ದಿನ, ಇಡೀ ಇಪ್ಪತ್ತು ನಾಲ್ಕು ಗಂಟೆ ಹಾಡುತ್ತಾಳೆ. ಆಗ ವಿಚಾರಿಸಿದರೆ ಆಕೆಯನ್ನು ನೋಡಲು ಯಾವುದೋ 'ಗಂಡು' ಬರುತ್ತದೆಯೆಂದೂ ಅದಕ್ಕಾಗಿಯೇ ಈ ತಯಾರಿ ಯೆಂದೂ ಗೊತ್ತಾಗುತ್ತದೆ.

ಅವಳು 'ಹಾಡು' ಅಭ್ಯಾಸ ಮಾಡುವಾಗಲಂತೂ ನಮ್ಮ ಮನೆಯಲ್ಲಿ ಒಬ್ಬರಿಗೊಬ್ಬರಿಗೆ ಮಾತು ಕೇಳಬೇಕಾದರೆ ಕಿರುಚಬೇಕು. ಮೊದಲೇ ಕಿವಿ ಮಂದವಾಗಿರುವ ನಮ್ಮಜ್ಜಿಯನ್ನು ಈ ಕಾಲದಲ್ಲಿ ನಮ್ಮ 'ತಾತನ ಆಣೆ'ಗೂ ಮಾತಾಡಿಸಲು ಸಾಧ್ಯವಿಲ್ಲ. ಹುಡುಗಿ ಸಂಗೀತ ಪಾಠ ನಿಲ್ಲಿಸಿದ ಅರ್ಧಗಂಟೆ ಯಾದಮೇಲೆ ನಮ್ಮ ಕಿವಿ ತಮಟೆಗಳ ಸ್ಪಂದನ 'ಮಾಮೂಲಿ'ಗೆ ಬರುತ್ತದೆ.

ಬಲಪಕ್ಕದ ಮನೆ ಹುಡುಗನದು ಹಾಡುಗಾರಿಕೆ-ಸೀನಿಯರ್ ಸಂಗೀತ ಪರೀಕ್ಷೆಗೆ ಕಟ್ಟುತ್ತಿದ್ದಾನಂತೆ, ಕೆಲವು ವರ್ಷಗಳಿಂದ ದಿನವಹಿ ಬೆಳಗಿನ ಜಾವ

ನಾಲ್ಕು ಗಂಟೆಗೆ ಏಳುತ್ತಾನೆ. ಏಳುತ್ತಾನೆ ಎನ್ನುವುದಕ್ಕಿಂತ ಎಬ್ಬಿಸಲ್ಪಡುತ್ತಾನೆ, ಎಂದರೆ ಸರಿಯಾದೀತು. ಅವನ ಅಜ್ಜ ಎದ್ದು ಅವನನ್ನು ಏಳುವಂತೆ ಕೂಗಾಡುತ್ತಾನೆ. ಈ ಕೂಗಾಟ ಅವರಪ್ಪನನ್ನೂ, ಅಮ್ಮನನ್ನೂ ಎಬ್ಬಿಸುತ್ತದೆ. ಅವರಿಬ್ಬರೂ ಎದ್ದು, ಎಳೆಯ ಮಕ್ಕಳನ್ನು ಎಬ್ಬಿಸಿಕೊಂಡು ಗಲಾಟೆ ಮಾಡಿ, (ಮಕ್ಕಳಿಂದ) ಮಾಡಿಸಿ, ಹುಡುಗನ ಕಣ್ಣು ತೆರೆಯಿಸುತ್ತಾರೆ. ಬೆಳಗಿನ ಜಾವದ ಈ ಗಲಾಟೆಯನ್ನು ಒಂದುದಿನ ಬೀಟಿನ ಪೋಲೀಸರು ಕೇಳಿ 'ಈ ಮನೆಗೆ ಕಳ್ಳರು ಬಿದ್ದಿದ್ದರೆ?' ಎಂದು ಪ್ರಶ್ನಿಸಿದರಂತೆ! ಪೋಲೀಸಿನವರಿಗೆ ಇದು 'ಗಲಾಟೆ'ಯೆನ್ನಿಸಿದ ಮೇಲೆ, ಪಕ್ಕದ ಮನೆಯವರ ಗತಿಯೇನು? ನೀವೇ ಯೋಚಿಸಿ!

ಆ ಹುಡುಗ ತೂಗಡಿಸುವ ಮುಖಕ್ಕೆ ತಣ್ಣೀರೆರಚಿಕೊಂಡು ಸಂಗೀತದ ಪುಸ್ತಕ ಹುಡುಕತೊಡಗಿದಾಗ ಪುನಃ ಗದ್ದಲ. ನಮಗೆ ಸುಮಾರಾಗಿ ನಿದ್ದೆ ಹತ್ತಿದ್ದನ್ನೇ ನೋಡಿಕೊಂಡು ಆತ 'ದಾದಾ....ದಪದಪ....ದಾದಾ' ಎಂದು ಆರಂಭಿಸಿ, ಮಾಸ್ಟರು ಹೇಳಿಕೊಟ್ಟ ರಾಗ, ಹಾಕಿಕೊಟ್ಟ ತಾಳಗಳನ್ನು ಬಿಟ್ಟು ತನ್ನದೇ ಒಂದು ರಾಗ, ತಾಳ ಮತ್ತು ಧ್ವನಿಯಲ್ಲಿ ಹಾಡತೊಡಗುತ್ತಾನೆ.

ಬೆಳಗಿನ ಜಾವದ ಅವನ ಹಾಡು ಅವರ ಮನೆಯ ಹಾಗೂ ನಮ್ಮ ಮನೆಯ ಹುಡುಗರನ್ನು ಎದ್ದು ಕುಳಿತುಕೊಂಡು ಅಳುವಂತೆ ಮಾಡಿ, ನಮಗೆ ಕೋಪ ಬರಿಸುತ್ತದೆ. ವಿಧಿಯಿಲ್ಲದೆ ಕಂಬಳಿಯಿಂದ ಮುಖ ಮುಚ್ಚಿಕೊಂಡು ಮಲಗುತ್ತೇವೆ.

ಒಂದು ದಿನ ನನ್ನ ತಮ್ಮ ಈ ಕೋಪದ ಭರದಲ್ಲಿ ಕಂಬಳಿಯ ಕೊನೆಯನ್ನೆಲ್ಲಾ ಹಲ್ಲಿನಿಂದ ಕಡಿದು ಉಗಿದುಬಿಟ್ಟ!

ಆ ಹುಡುಗನ ಒಂದು ವೈಶಿಷ್ಟ್ಯವೆಂದರೆ, ಆತ ಹಾಡುವಾಗ ತಾಳ ಹಾಕುವುದಕ್ಕೋಸ್ಕರ ತೊಡೆ ತಟ್ಟುವುದು. ಅವನ ತಾಳ ಅನೇಕವೇಳೆ ರಾಗಕ್ಕಿಂತ ಜೋರಾಗಿರುತ್ತೆ. ಒಂದು ಸಾರಿ ಮನೆಯ ಮುಂದಿನ ಜಗುಲಿಯ ಮೇಲೆ ಕುಳಿತುಕೊಂಡು ಹಾಡುತ್ತ ರಸ್ತೆಯಲ್ಲಿ ಹೋಗುತ್ತಿದ್ದ ಯಾರನ್ನೋ ದೃಷ್ಟಿಸಿ ನೋಡುತ್ತ (ಇದು ಸಂಗೀತಗಾರರೆಲ್ಲರ ಅಭ್ಯಾಸ) ತಾಳ ಹಾಕುತ್ತಿದ್ದನಂತೆ. ಅವನ ಅದೃಷ್ಟಕ್ಕೆ, ಇವನು ದೃಷ್ಟಿಸಿದಾತ ಗರಡಿ ಸಾಧಕನಂತೆ. ಹುಡುಗ ತೊಡೆ ತಟ್ಟಿ ತನ್ನನ್ನು ನೋಡುವುದರಿಂದ ಅವನು ರೇಗಿ ಒಂದೇ 'ಪಟ್ಟಿ'ನಿಂದ

ಅವನನ್ನು ಜಗುಲಿಯ ಕೆಳಗೆ ಉರುಳಿಸಬೇಕೆಂದು ಬಂದನಂತೆ. ಅಕ್ಕಪಕ್ಕದವರು ಅವನನ್ನು ತಡೆದು, ಬಿಡಿಸದಿದ್ದರೆ, ಆ ಹುಡುಗನ ರಾಗವನ್ನು ನಾವು ಪುನಃ ಕೇಳುವಂತೆಯೇ ಇರಲಿಲ್ಲ.

ಆ ಹುಡುಗನ ಇನ್ನೊಂದು ವೈಶಿಷ್ಟ್ಯವೆಂದರೆ: ಆತ ಹಾಡುವಾಗ 'ಮಂಗ'ನನ್ನು ಮೀರಿಸುವ ಮುಖ ಮಾಡುವುದು. ಆತನಿಗೆ ಮೊದಲೇ ಕೊಂಚ ಹಲ್ಲು ಉಬ್ಬು. ಹಾಡುವಾಗ ಹಲ್ಲು ಕಿರಿಯುತ್ತಾನೆ. ಸಂಗೀತಗಾರರಿಗೆ ಸೊಟ್ಟಮೋರೆ ಮಾಡುವುದೊಂದು ನೋಂಕುಜಾಡ್ಯ. ಸೊಟ್ಟಮೋರೆ ಮಾಡಿದಷ್ಟೂ ಆತ ಅಷ್ಟು ಉತ್ತಮ ಹಾಡುಗಾರನೆಂದು ಸಂಗೀತ-ಲಕ್ಷಣ ಶಾಸ್ತ್ರದಲ್ಲಿ ಹೇಳಿದೆಯೋ ಏನೋ ಗೊತ್ತಿಲ್ಲ. ಅವರು ತಲೆದೂಗಿಕೊಂಡು, ದವಡೆಗಳನ್ನು ಓರೆಕೋರೆ ಮಾಡಿಕೊಂಡು, ತುಟಿಗಳನ್ನು ಸಿಂಡರಿಸಿಕೊಂಡೋ ಇಲ್ಲ ಚೂಪು ಮಾಡಿಕೊಂಡೋ, ಎರಡು ಹುಬ್ಬುಗಳನ್ನೂ ಕೂಡಿಸಿಕೊಂಡು ತಾಳದವನನ್ನೊ, ಪಿಟೀಲಿನವನನ್ನೊ ದೃಷ್ಟಿಸಿಕೊಂಡು ಅವನನ್ನು ಅಣಕಿಸುವಂತೆ ಆಡುವುದು, ಯಾರಿಗಾದರೂ 'ಭಯ-ಅಸಹ್ಯ'ವನ್ನುಂಟುಮಾಡುವುದು. ಕೆಲವರು ಹಾಡುವಾಗ ರಾಗದ ಏರಿಕೆಯೊಂದಿಗೆ ಎದ್ದೆದ್ದು ಮೊಣಕಾಲಿನ ಮೇಲೆ ನಿಲ್ಲುತ್ತಾರೆ. ಕೆಲವರಂತೂ ರಾಗ ತುಟ್ಟತುದಿಗೆ ಹೋದಾಗ ಅ ವ ರೂ ಅಂಕಣದವರೆಗೆ ಹಾರಿ, ತೊಲೆಯ ಮೇಲೆ ಕುಳಿತುಕೊಂಡು, ರಾಗ ಇಳಿದಾಗ ಇಳಿದು ಬರುವರು. ಮತ್ತೆ ಕೆಲವರು ಹಾಡುವ ರಭಸದಲ್ಲಿ ವೇದಿಕೆಯ ಮೇಲೆಲ್ಲ ತೆವಳಿ, ಬಳಸಿ, ಹಾಸಿದ ಜಮಖಾನವನ್ನೆಲ್ಲಾ ಸುಕ್ಕು-ಸುಕ್ಕು ಮಾಡುತ್ತಾರೆ. ಇನ್ನೂ ಕೆಲವರು 'ಫಲಕು' ಹಾಕುವಾಗ ತಲೆಯ ಗಂಟು ಬಿಚ್ಚಿಕೊಳ್ಳಲೇಬೇಕೆಂಬ 'ಹಠ' ತೊಟ್ಟವರಂತೆ ತಲೆಯಾಡಿಸುತ್ತಾರೆ.

ರೇಡಿಯೊ ಕಂಡುಹಿಡಿದವರಿಗೆ ನಮೋ ನಮೋ! ಅವರು ಹಾಡುವವರ ಮುಖವನ್ನು ನಮ್ಮಿಂದ ಮರೆ ಮಾಡಿ ನಮಗೆ ಉಪಕರಿಸಿದ್ದಾರೆ. ಆದರೆ 'ಟೆಲಿವಿಷನ್' ಬಂದಮೇಲೆ....ಸಂಗೀತಗಾರರ ಮುಖದರ್ಶನದಿಂದ ಮುಕ್ತಿ ದೊರೆಯುವುದಿಲ್ಲ!

ಪಕ್ಕದ ಮನೆ ಹುಡುಗನ ಹಾಡುಗಾರಿಕೆಯ ಬಗ್ಗೆ ಇನ್ನೊಂದು ಮಾತು. ಒಂದು ಸಂಜೆ ನಾವೆಲ್ಲ ವಿನೋದಕ್ಕಾಗಿ ಬೀದಿಯ ಚಿಕ್ಕಹುಡುಗರನ್ನೆಲ್ಲ ಸೇರಿಸಿ

ಪುಸಲಾಯಿಸಿ ಅವರ ಕೈಲಿ ಒಂದು ಕತ್ತೆಯನ್ನು ಎಳೆತರಿಸಿ ಹಾಡುವ ಹುಡುಗನ ಕೋಣೆಯ ಕಿಟಕಿಯ ಬಳಿ ನಿಲ್ಲಿಸಿದೆವು. ಆ ಹುಡುಗನ ಹಾಡುಗಾರಿಕೆಯನ್ನು ಕೇಳಲು ಕತ್ತೆ ಹಾಜರಾಗಿದೆಯೆಂದು ಹಾಸ್ಯ ಮಾಡಿದೆವು. ಆದರೆ ಮಾರನೆಯ ದಿನದಿಂದ ಅದೇ ವೇಳೆಗೆ, ಆತ ಹಾಡುವ ಹೊತ್ತಿಗೆ ಸರಿಯಾಗಿ, ಆ ಕತ್ತೆಯೆ ಅಲ್ಲಿಗೆ ಬರತೊಡಗಿತು. ಆತನ ಹಾಡುಗಾರಿಕೆಯಲ್ಲಿ ಕತ್ತೆಗೆ ಅಷ್ಟು ಆಸಕ್ತಿ ಇರುವಲ್ಲಿ....ಇನ್ನು ನಮಗೆ ?

ಒಂದು ದಿನ ಅವರ ಮನೆಯ ಮಾಲೀಕ ಈ ಹುಡುಗನ ಹಾಡುಗಾರಿಕೆಯನ್ನು ನೋಡಿ, ತನ್ನ ಮನೆಯ ಹೆಂಚುಗಳು ಸಂದುಬಿಟ್ಟು ಮಳೆಗಾಲದಲ್ಲಿ ಸೋರತೊಡಗಿದ್ದು ಆತನ ಹಾಡುಗಾರಿಕೆಯಿಂದಲೇ ಎಂದು ತೀರ್ಮಾನಿಸಿ, ಆತನ ಮೇಲೆ ಮೊಕದ್ದಮೆ ಹೂಡಿದನಂತೆ. ಓಬೀರಾಯನ ಕಾಲದಲ್ಲಿ ಹಾಕಿದ್ದು ಈಗ ಹುಳು ತಿಂದು ಕೆಳಗುರುಳಿದ ದೂಲ ಇವನ ಹಾಡುಗಾರಿಕೆಯ ಪ್ರಭಾವದಿಂದಲೇ ಎಂದೂ ಅವನ ಮೇಲೆ ಆರೋಪಿಸಿದನಂತೆ.

ನ್ಯಾಯಾಸ್ಥಾನದಲ್ಲಿ ವಾದಿಯ ಪರ ವಕೀಲರು ಹೆಚ್ಚು 'ವಕಾಲತ್ತಿ'ಗೆ ಹೋಗಲಿಲ್ಲ. ಆ ಹುಡುಗನನ್ನು ಕ್ಷಣಕಾಲ ಹಾಡಿಸುವಂತೆ ನ್ಯಾಯಾಧೀಶರಲ್ಲಿ ವಿಜ್ಞಾಪಿಸಿಕೊಂಡರು. ಹುಡುಗನಿಗೆ ಮೊದಲೇ ಕೋಪ ಬಂದಿತ್ತು. ಜೋರಾಗಿ ಕಿರಚಿ, ಹಾಡಿ ಆ ಮೂಲಕ ಸೇಡು ತೀರಿಸಿಕೊಳ್ಳಲು ಹವಣಿಸಿದ. 'ದಶಮ ಸ್ವರ'ದಲ್ಲಿ ಹಾಡತೊಡಗಿದ. ನ್ಯಾಯಾಸ್ಥಾನದ ಜವಾನರು ಅವನ ಬಾಯಿ ಮುಚ್ಚಿ, ಆತನನ್ನು ಆಚೆಗೆ ಎತ್ತಿಕೊಂಡುಹೋದರೂ ಅವನು ಹಾಡು ನಿಲ್ಲಿಸಲಿಲ್ಲ. ನ್ಯಾಯಮೂರ್ತಿ ಆತನ ವಿರುದ್ಧ ತೀರ್ಪಿತ್ತರು.

ಇದಾದ ಮೇಲೆ ಹೆಂಚಿನ ಮನೆಯ ಮಾಲೀಕರೆಲ್ಲ ಸಂಘವೊಂದನ್ನು ಮಾಡಿಕೊಂಡು, ಸಭೆ ಸೇರಿ ಸಂಗೀತಾಭ್ಯಾಸಿಗಳಿಗೆ ಮನೆ ಕೊಡಕೂಡದೆಂದು 'ಠರಾವು' ಮಾಡಿ ಅದನ್ನು ಬಾಡಿಗೆ ಹತೋಟಿ ಅಧಿಕಾರಿಗಳಿಗೂ ಕಳುಹಿಸಿ ಅವರು ಅದಕ್ಕೆ ಸಹಕರಿಸಬೇಕೆಂದೂ, ತನ್ಮೂಲಕ ತಮ್ಮ ಮನೆಗಳ ಹೆಂಚನ್ನು ಉಳಿಸಿಕೊಡಬೇಕೆಂದೂ ಪ್ರಾರ್ಥಿಸಿಕೊಂಡಿದ್ದಾರಂತೆ. ತಾರಸೀ ಮನೆ ಮಾಲೀಕರೂ ಮುಂಜಾಗರೂಕತೆಗಾಗಿ ಈ ಕೆಳಕಂಡ 'ಷರತ್ತು'ಗಳೊಂದಿಗೆ ಮನೆ ಕೊಡಬೇಕೆಂದು ನಿರ್ಧರಿಸಿದ್ದಾರಂತೆ.

೧) ಬಾಡಿಗೆದಾರನ ಮನೆಯಲ್ಲಿ ಏನೇನು ಸಂಗೀತ ಸಾಮಗ್ರಿಗಳಿವೆ? ಅವನ್ನು ಯಾರು ಯಾರು ಯಾವಾಗ ಬಾರಿಸುತ್ತಾರೆ? ಏಕೆ ಬಾರಿಸುತ್ತಾರೆ? ಬಾರಿಸದಿದ್ದರೆ ಏನಾಗುತ್ತೆ?—ಎಂಬುದನ್ನು ಸಪ್ರಮಾಣವಾಗಿ ತಿಳಿಸಬೇಕು.

೨) ಸಂಗೀತಾಭ್ಯಾಸಿ ಬಾಡಿಗೆದಾರರಿಂದ ತಮ್ಮ ಮನೆಯ ಯಾವ ಭಾಗಕ್ಕೂ ಅಪಾಯ ತಟ್ಟುವುದಿಲ್ಲವೆಂದೂ, ಒಂದು ವೇಳೆ ತಟ್ಟಿದಲ್ಲಿ ಅದನ್ನು ತಮ್ಮ ಸ್ವಂತ (ಬಾಡಿಗೆದಾರರ) 'ಲಾಗೋಡಿ'ನಿಂದ ಸರಿಪಡಿಸಿಕೊಡುವುದೆಂದೂ ಬರೆಸಿಕೊಳ್ಳುವುದು.

೩) ಸರ್ಕಾರದಿಂದ ಅಂಗೀಕೃತರಾದ ಸಂಗೀತ - ಉಪಾಧ್ಯಾಯರಿಂದ ಖಚಿತಗೊಳಿಸಿರುವ 'ರಾಗ'ಗಳನ್ನು ಮಾತ್ರ ಅವರು ಅಭ್ಯಾಸಮಾಡಬೇಕು; ಈ ರಾಗಗಳು ಮನೆಗೆ ಅಪಾಯ ತರುವಂತಹವಲ್ಲವೆಂದು ಸರ್ಕಾರೀ 'ಎಂಜನಿಯರ್' 'ಸರ್ಟಿಫೈ' ಮಾಡಬೇಕು.

೪) ಯಾವುದೇ ಸಂದರ್ಭದಲ್ಲಿಯಾಗಲೀ, ಹಾರ್ಮೋನಿಯಂ ಹುಡುಗ ಯಾ ಹುಡುಗಿ ಏಕಕಾಲದಲ್ಲಿ ಹಾಡಬಾರದು.

* * *

ಮೊನ್ನೆ ಇನ್ನೊಂದು ವಿಚಿತ್ರ ಪ್ರಸಂಗ ನಡೆಯಿತು. ರೋಗಿಯೊಬ್ಬನಿಗೆ ಪ್ರಸಿದ್ಧ ಡಾಕ್ಟರರೊಬ್ಬರು ಕಲಿತ ಸಾಹಸವನ್ನೆಲ್ಲಾ ಖರ್ಚು ಮಾಡಿದರೂ ಕಾಯಿಲೆ ಗುಣಮುಖವಾಗಲಿಲ್ಲ. ಆದರೆ ಅವರ ಪಕ್ಕದ ಮನೆಯಲ್ಲಿದ್ದ ಸಂಗೀತಾಭ್ಯಾಸಿಯೊಬ್ಬ ಬೇರೆ ಮನೆಗೆ ಹೋದ ಸುದ್ದಿಯನ್ನು ಕೇಳಿ ಆತನಿಗೆ ಗುಣಮುಖವಾಯಿತಂತೆ.

ಗುಣಹೊಂದಿದಾತ ಯಾರದೊ ಗೌರವಾರ್ಥವಾಗಿ ಭೋಜನ ಕೂಟಕ್ಕೆ ಹೋಗಿದ್ದಾಗ, ಎಲ್ಲರೂ ಊಟ ಮಾಡಿ, ತಾಂಬೂಲ ಮೆಲ್ಲುತ್ತಿದ್ದಾಗ ಯಾರೊ ಒಬ್ಬ ಮೆಲ್ಲುಲಿಯಲ್ಲಿ 'ಸರಿ....ಮಾಗರಿ....ಗರಿಸಾ' ಎಂದು ಗೊಣಗಿದ. ಬಿಟ್ಟೀ ಸಂಗೀತದಲ್ಲಿ ಅತ್ಯಾಸಕ್ತಿ ವಹಿಸುತ್ತಿದ್ದ ಮಹನೀಯರೊಬ್ಬರು ಇವರನ್ನು ಹಾಡುವಂತೆ ಪ್ರೇರೇಪಿಸಿದರಂತೆ. ಅವರು ಹೇಳಿದ್ದೇ ಸಾಕು 'ಹೋ' ಎಂದು ಕಣ್ಣುಮುಚ್ಚಿಕೊಂಡು ಆಲಾಪನೆಗೆ ಆರಂಭಿಸಿಬಿಟ್ಟರಂತೆ. ಅವರು ಆಲಾಪನೆ

ಮಾಡಿ ಮುಗಿಸಿ ಕಣ್ಣು ತೆರೆದಾಗ ನೆರೆದಿದ್ದ ಸಭಿಕರೆಲ್ಲರೂ ಅದೃಶ್ಯರಾಗಿದ್ದರು. 'ಸಾಸಾನೀನೀ' ಕೇಳಿದ ಕೂಡಲೆ ಅವರೆಲ್ಲ ಸರಸರನೆ ಸ್ವಗೃಹಗಳಿಗೆ ತೆರಳಿದರು.

ಆದರೆ ಗುಣಹೊಂದಿದಾತನಿಗೆ ಮತ್ತೆ ಕಾಯಿಲೆ ಚಿಹ್ನೆಗಳು ಕಾಣಿಸಿ ಕೊಂಡವಂತೆ. ಅಂದಿನಿಂದ ಡಾಕ್ಟರು ಅವರನ್ನು ಸಂಗೀತಾಭ್ಯಾಸಿಗಳಿಂದ ದೂರ ವಿಟ್ಟಿದ್ದಾರಂತೆ!

ಸಂತತವಾಗಿ ಸಂಗೀತಾಭ್ಯಾಸಿಯ ಪಕ್ಕದಲ್ಲೇ ಇದ್ದು ಅನುದಿನ ಅವನ ಕಿರುಕುಳಗಳನ್ನು 'ಕರ್ಣಗತ' ಮಾಡಿಕೊಂಡಿದ್ದವರೊಬ್ಬರಿಗೆ ಪಕ್ಕದ ಮನೆಯ ಸಂಗೀತಾಭ್ಯಾಸಿ ಬಿಟ್ಟುಹೋಗುತ್ತಲೂ, ಇವರಿಗೆ ಬುದ್ಧಿಯೇ ಸ್ವಾಧೀನ ತಪ್ಪಿ ತಂತೆ! ಮತ್ತೊಬ್ಬ ಸಂಗೀತಾಭ್ಯಾಸಿ ಆ ಮನೆಗೆ ಬಂದು ಅಭ್ಯಾಸ ಆರಂಭಿಸುವ ವರೆಗೂ ಬುದ್ಧಿ ಸ್ವಾಧೀನಕ್ಕೆ ಬರಲೇ ಇಲ್ಲವಂತೆ!

ಅದೆಲ್ಲಾದರೂ ಹೋಗಲಿ, ನಮ್ಮ ಮನೆಯಲ್ಲೇ ತೆಗೆದುಕೊಳ್ಳಿ. ಪಕ್ಕದ ಮನೆಯಿಂದ ಪ್ರಾತಃಕಾಲ, 'ಲಂಬೋದರ' ಕೇಳಿ ಕೇಳಿ ಎಚ್ಚರಗೊಳ್ಳುತ್ತಿದ್ದ ನಾವು, ಒಂದು ದಿನ 'ಲಂಬೋದರ' ಕೇಳದೆ, ಇನ್ನೂ ಹೊತ್ತಾಗಿಲ್ಲವೆಂದು, ಮಧ್ಯಾಹ್ನದವರೆಗೂ ಮಲಗಿದ್ದೆವು. ನಮ್ಮ ಕೊನೆಯ ಮಗುವಿನ ಕೈಲಿ 'ಲಂಬೋದರ' ಅನ್ನಿಸುವವರೆಗೂ ನನ್ನ ತಮ್ಮ ಹಾಸಿಗೆ ಬಿಡಲೇ ಇಲ್ಲ!

* * *

ನಮ್ಮ ಮನೆ ಎದುರು ಮನೆ ಮೃದಂಗದಂಗಡಿ. ಮೃದು-ಅಂಗ ಅಂತ ಅದಕ್ಕೆ ಹೆಸರಿಟ್ಟಿದ್ದರೂ ಅದು ಕೊಡುವ ನಾದ ಕಠಿಣವೇ? ಮೃದಂಗದಂಗ ಡಿಯ ಪಕ್ಕದಲ್ಲಿ ಸೇವಿಂಗ್ ಸೆಲೂನ್. ಸೇವಿಂಗ್ ಸೆಲೂನಿಗೂ ಸಂಗೀತಕ್ಕೂ ಬಾದರಾಯಣ ಸಂಬಂಧ. ಸೆಲೂನಿನಾತ 'ಸಂಗೀತಕೋರ'. 'ಗಿರಾಕಿ'ಗಳಿಲ್ಲ ದಾಗ ಕೊಳಲು ಅಭ್ಯಾಸ ಮಾಡುತ್ತಾನೆ. ನಾವು ನೋಡಿದ್ದರಲ್ಲಿ, ಅವನಿಗೆ 'ಗಿರಾಕಿ'ಗಳ ಕಾಲಕ್ಕಿಂತ ಕೊಳಲು ಬಾರಿಸುವ ಕಾಲವೇ ಜಾಸ್ತಿಯೆಂದು ಕಾಣುತ್ತದೆ. ಒಂದೊಂದು ದಿನ ಅವನು ಡೋಲಿಗೂ ಕೈ ಇಡುತ್ತಾನೆ. ಆಗ ನಮ್ಮ ಗೋಳು ಗೋವಿಂದನಿಗೇ ಗೊತ್ತು!

ಒಂದೊಂದುದಿನ ಕೊಳಲಿನವನಿಗೂ ಮೃದಂಗದವನಿಗೂ ಸ್ಪರ್ಧೆ ಬಿದ್ದು ಇಬ್ಬರೂ ಆವರವರಂಗಡಿಗಳಲ್ಲೇ ಇದ್ದುಕೊಂಡು ಒಬ್ಬರಿಗೊಬ್ಬರಿಗೆ 'ವರಸೆ' ಹಾಕುತ್ತಾರೆ. ಒಂದೊಂದು ವೇಳೆ, ಅದೇ ಕಾಲದಲ್ಲಿ ಈ ಪಕ್ಕದ ಮನೆ

ಹುಡುಗಿ, ತನ್ನ ಮಾಸ್ತರ 'ಗಂಡುಧ್ವನಿ' ಮತ್ತು ಹಾರ್ಮೋನಿಯಂನ 'ಕೂಗುಧ್ವನಿ'ಯೊಂದಿಗೆ ಕಿರಚುತ್ತಾಳೆ. ಆ ಪಕ್ಕದ ಮನೆಯ ಹುಡುಗ 'ಸಹಸ್ರತಾಳ'ದೊಂದಿಗೆ ಹಾಡುತ್ತಾನೆ. ಆಗ ಕಿಟಕಿಯ ಬಳಿ ಇರುವ 'ಖಾಯಂ' ಕತ್ತೆ ಕಿರಚುತ್ತದೆ!

ಆಗ ನಮಗೂ ಅನ್ನಿಸುತ್ತದೆ, ಈ ಜಗತ್ತಿನಲ್ಲಿ ಬದುಕಿರಬೇಕಾದರೆ ನಾವೂ ಸಂಗೀತಾಭ್ಯಾಸಿಗಳಾಗಬೇಕೆಂದು. ನೆರೆಹೊರೆಗೆ 'ಸಂಗೀತೋಪದ್ರವ' ವನ್ನು ನಾವು ಕೊಡಬೇಕೆಂದು ನಿರ್ಧರಿಸುತ್ತೇವೆ. ಯಾವುದಾದರೂ ರೀತಿಯ ಸಂಗೀತ ಕಲಿತು ಈ ಅಭ್ಯಾಸಿಗಳೆಲ್ಲರ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು 'ಹಠ' ತೊಡುತ್ತೇವೆ. ಏಕೆಂದರೆ ಸಂಗೀತವನ್ನು ಸಂಗೀತದಿಂದಲೇ ಸುಮ್ಮ ನಿರಿಸಬೇಕಾಗುತ್ತದೆ.

ಆಗ ನಮಗರಿವಿಲ್ಲದೆ ನಾವೂ 'ಸರಿಮಾಗರಿ....ಗರಿಗರಿಸಾ' ಎಂದು ಹಾಡ ತೊಡಗುತ್ತೇವೆ. ತಾಳಕ್ಕಾಗಿ ತೊಡೆ ತಟ್ಟುತ್ತೇವೆ. ಮುಂದಿರುವ ಮೇಜನ್ನೇ ಹಾರ್ಮೋನಿಯಂನಂತೆ ಬಾರಿಸುತ್ತೇವೆ, ಡೋಲಿನಂತೆ ಬಡಿಯುತ್ತೇವೆ. ಕೈಲಿದ್ದ ಪೆನ್ಸಿಲ್ಲನ್ನೇ ಕೊಳಲಾಗಿ ಮಾಡಿಕೊಂಡು ಊದುತ್ತೇವೆ. ನಮ್ಮ ಹಾಡಿಗೆ ನಾವೇ ಮನ ಸೋತು 'ಪಕ್ಕಾ' ಸಂಗೀತಗಾರರಂತೆ ತಲೆಯಾಡಿಸಿ, ತುಟಿಯಾಡಿಸಿ ಮಂಗನ ಮುಖ ಮಾಡಿಕೊಳ್ಳುತ್ತೇವೆ!

# ಉತ್ಪ್ರೇಕ್ಷೆ !

ನನ್ನ ಹತ್ತಿರದ ಸ್ನೇಹಿತ ಕುತೂಹಲರಾಯ ಇತ್ತೀಚೆಗೆ 'ಸಾಹಿತ್ಯ ಸಂಶೋಧನೆ'ಗೆ ಕೈಹಾಕಿದ್ದಾನೆಂಬ ವರ್ತಮಾನ ನಮಗೆಲ್ಲ ತಲುಪಿತು.

ನಿಧನ ವಾರ್ತೆಗಳು ತಲುಪುವುದು ನಿಧಾನವಾದರೂ ಇಂಥ ಸುದ್ದಿಗಳು ತಾರಿಗಿಂತ ನೇರವಾಗಿ ನಮಗೆ ತಲಪುತ್ತವೆ. ಅಂದರೆ, ಈಗಿನ ಕಾಲದ 'ತಾರು'ಗಳ ಮಾತಲ್ಲ, ಹಿಂದಿನ ಕಾಲದ ತಾರುಗಳು! ಈಗಿನ ಕಾಲದ 'ತಾರು'ಗಳ ತರವೇ ಬೇರೆ, "ಇದೊ ಹೊರಟೆ. ನಾಳೆ ಸಂಜೆ ತಲುಪುತ್ತೇನೆ"—ಎಂದು ತಾರು ಕೊಟ್ಟು ರೈಲು ಹತ್ತಿದರೆ ನಾವು ತಲುಪಿದ ಮೇಲೆ ತಾರಿನವನು, ನಮ್ಮ ತಾರನ್ನು ನಮಗೇ ಕೊಟ್ಟು ನಮ್ಮ ರುಜು ತೆಗೆದುಕೊಳುವುದೇ ಈಗಿನ ಕಾಲದ 'ತಾರಿ'ನ ವೈಶಿಷ್ಟ್ಯ!

ಕುತೂಹಲರಾಯನ ಈ ಹೊಸ 'ಉದ್ಯಮ' ತಿಳಿದು ನಾನೂ ನನ್ನ ಗೆಳೆಯರೂ ಕೊಂಚ ಹುಷಾರಾಗಬೇಕಾಯಿತು. ವಿಮಾ ದಳ್ಳಾಳಿ, ಮನಿ ಸರ್‍ಕ್ಯುಲೇಟಿಂಗ್ ಕಂಪೆನಿ, ವಿವಿಧ ವಿನೋದ ಹಾವಳಿಯವರು, ಹೊಸ ಕಂಪೆನಿ ಷೇರುಗಳ ಮಾರಾಟಗಾರರು; ಸಂಘ, ಸಂಸ್ಥೆ, ಕೂಟ, ಗೋಷ್ಠಿ, ಪರಿಷತ್ತು, ಸಮಾವೇಶ, ಸಭೆ, ಸಪ್ತಾಹಗಳ ವಾರ್ಷಿಕೋತ್ಸವ, ಪಾರ್ಶ್ವಿಕೋತ್ಸವ (ಮೂರು ಮೂರು ತಿಂಗಳಿಗೊಂದಾವರ್ತಿ ನಡೆಸುವ ಉತ್ಸವ), 'ಆರಂಭೋ'ತ್ಸವ (ವ್ಯವಸಾಯ ಕೆಲಸದ ಉತ್ಸವವಲ್ಲ), ಶತಮಾನೋತ್ಸವ ಮುಕ್ತಾಯ ಮಹೋತ್ಸವ, ಇತ್ಯಾದಿಗಳಿಗೆ ಚಂದಾ ವಸೂಲಿ ಮಾಡುವವರು; ನಿಮ್ಮೂರಲ್ಲಿ ನಮ್ಮ 'ಕಥೆ' 'ಇಡಿಸಿ' ಎಂದು ಕಾಡುವ ಕೀರ್ತನಕಾರರು ಇವರೆಲ್ಲರ ಪಟ್ಟಿಗೆ ಕುತೂಹಲರಾಯನನ್ನೂ 'ದಾಖಲು' ಮಾಡಿಕೊಳ್ಳಬೇಕಾಯಿತು. ಅವನ ಕೈಗೆ ಸಿಕ್ಕದಂತೆ, ಕಣ್ಣಿಗೆ ಬೀಳದಂತೆ ಎಚ್ಚರಿಕೆ ವಹಿಸಬೇಕಾಯಿತು. ಇದಕ್ಕೆ. ಕಾರಣ, ನಮ್ಮ ಪ್ರಾಚೀನ ಅರ್ವಾಚೀನ 'ಸಾಹಿತ್ಯ ಸಂಶೋಧಕ'ರ ಮಾಜೀ ಕಿರುಕುಳಗಳೇ!

ಕುತೂಹಲರಾಯ ಬಿ.ಎ. ಪದವಿಗಾಗಿ ಓದುತ್ತಿದ್ದಾಗಲೇ ಆತ ಏನಾದರೂ ಒಂದು ಗತಿಯಾಗುತ್ತಾನೆಂದು ಎಲ್ಲರೂ ನಿರ್ಧರಿಸಿದ್ದರು. ದಿನ ಬಿಟ್ಟು ದಿನ ಮುಖ ಕ್ಷೌರ ಮಾಡಿಕೊಂಡು ಕೆನೆ, ಮಂಜು, ಚೂರ್ಣಗಳಿಂದಲಂಕೃತನಾಗಿ ಬರುತ್ತಿದ್ದ ಹುಡುಗ 'ಏಕದಂ' ತಿಂಗಳಿಗೊಂದುಸಾರಿ ಮುಖಕ್ಷೌರ ಮಾಡಿಕೊಳ್ಳ ತೊಡಗಿದ. ಆ ಮೇಲೆ ಕ್ಷೌರ ಮಾಡಿಕೊಳ್ಳುವ ಹವ್ಯಾಸಕ್ಕೇ ಹೋಗಲಿಲ್ಲ. ಗಡ್ಡ ಬೆಳೆದು ಮುಂಡಿಯನ್ನೂ ದಾಟಿ ಮುಂದುವರಿಯಿತು. ಮೀಸೆಯ ಎಡಬಲ ತುದಿಗಳು ಎಡಬಲ ಭುಜಗಳನ್ನು ದಾಟಿ ಹೊರಗೆ ತೂರಾಡಿ, ತೂಗಾಡಿ ಕಂಪಿಸ ತೊಡಗಿದವು. ಕ್ರಾಪಂತೂ ನಾಟಕದ ನಟರಿಗಿಂತ ಉದ್ದನಾಗಿ ಬೆಳೆದು ಹಿಂಭಾಗದ ಕೊರಳ ಮೇಲೆ ಕೊನೆಗಾಣದೆ ಮಲಗಿತ್ತು. ನೀರು ಕಾಣದ ಅವನ ಬಿಳಿಯ ಬಟ್ಟೆಗಳು ಕರಿಯ ರೇಷಿಮೆ ವರ್ಣಕ್ಕೆ ತಿರುಗಿ ಹೊಳೆಯುತ್ತಿದ್ದುವು.

ಕೆಲವರು ಆತನನ್ನು "ಏನ್ರಿ, ಊರಿಂದ ಮನಿಯಾರ್ಡರು ಬರಲಿಲ್ಲವೆ? ನಾವೇ ಕೊಟ್ಟರೋಣವೆ, ಹಜಾಮತ್ತಿಗೆ ಹಣ!" ಎಂದು ಕೇಳಿದರು. ಮತ್ತೆ ಕೆಲವರು "ಮನೆಯಲ್ಲಿ ಇನ್ನೂ ಹೆರಿಗೆಯಾಗಲಿಲ್ಲವೆ?" ಎಂದು ಪ್ರಶ್ನಿಸಿದರು. "ಯಾವುದಾದರೂ ಕಂಪನಿಗೆ, 'ವಿಶ್ವಾಮಿತ್ರನ ಪಾತ್ರ' ಹಾಕಲು ಒಪ್ಪಂದ ಮಾಡಿಕೊಂಡಿದ್ದೀರಾ?'—ಎಂದು ಕೆಲವರು ಕೆಣಕಿದರು. "ಯಾವ ಪರ್ವತಕ್ಕೆ ಹೋಗ್ತೀರಿ ತಪಸ್ಸಿಗೆ, ವಿಂಧ್ಯಪರ್ವತಕ್ಕೊ, ಹಿಮಾಲಯದ ಮಾನಸ ಸರೋವರಕ್ಕೊ?" ಎಂದು ಅಣಕಿಸಿದರು. "ಎಲ್ಲಿಗಾದರೂ ಹೋಗಿ, ಆದರೆ ಯಾವ ಗಿರಿಜಾ, ಮೇನಕಿಯರಿಂದಲೂ ನಿಮ್ಮ ತಪೋಭಂಗವಾಗದಂತೆ ನೋಡಿಕೊಳ್ಳಿ"—ಎಂದು ಗೇಲಿ ಮಾಡಿದರು.

ಆತ ಯಾರಿಗೂ ಉತ್ತರಿಸದೆ ಅಂತರ್ಮುಖಿಯಾಗುತ್ತಿದ್ದ. ದಿನ ಕಳೆದಂತೆ ಆತನ ಮೂಗು ಉದ್ದವಾಗಿ ನೇಗಿಲಿನ ರೂಪತಾಳಿ, ಮುಗಿಲಿನಕಡೆ ತಿರುಗಿತು. ಕಣ್ಣುಗುಡ್ಡೆಗಳು ಒಳಗೆ ಹೋಗ ತೊಡಗಿದವು.

ಅನ್ಯಾಯವಾಗಿ ಹುಡುಗ ಹೀಗಾಗ ತೊಡಗಿದನೆಂದು ಎಲ್ಲರೂ ಮರುಕಪಟ್ಟರು. ಯಾರೂ ಅವನನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಿಲ್ಲ.

ಮತ್ತೆ ಕೆಲವು ಕಾಲದ ನಂತರ ಆತನ ಮನೆಯವರು ಆತ ಮನೆಗೆ ಬಂದು ಮೂರು ದಿನವಾಗಿದೆಯೆಂದೂ, ಕಾಲೇಜಿನಲ್ಲೇ ಏನಾದರೂ ಇದ್ದು ಬಿಟ್ಟಿದ್ದಾನೇನೊ ಎಂದು ನೋಡುವುದಕ್ಕಾಗಿ ಕಾಲೇಜಿಗೇ ಹುಡುಕಿಕೊಂಡು ಬಂದಿದ್ದರು. ನಾವೆಲ್ಲ ಆತನ ಇತ್ತೀಚಿನ ವರ್ತನೆ, ಉಡುಪು, ರೂಪುಗಳ ಸಂಬಂಧವಾಗಿ ಆತನ ಮನೆಯವರೊಂದಿಗೆ ಪ್ರಶ್ನಿಸಿದೆವು. ಪಾಪ! ಇಳಿ ವಯಸ್ಸಿನ ತಂದೆ ತಾಯಿ, ಎಳೆ ವಯಸ್ಸಿನ ತಮ್ಮಂದಿರು, ಮದುವೆ ವಯಸ್ಸಿನ ಮುಗ್ಧ ತಂಗಿಯರು....ಇವರಾರಿಗೂ ಅವನ ನಡವಳಿಕೆಯ 'ತಲೆ - ಬುಡ' ಗೊತ್ತಾಗಿಲ್ಲವಂತೆ !

ಈಚೆಗಂತೂ ಎಲ್ಲೆಲ್ಲಿಂದಲೊ ಓಲೆಗರಿಗಳನ್ನು ತಂದು ತಂದು ಕೋಣೆಯ ತುಂಬಾ ತುಂಬಿಕೊಂಡಿದ್ದಾನಂತೆ. ಗುಜರಿಗೆ ಬಂದ ಪುಸ್ತಕಗಳಲ್ಲಿ ಬಹು ಭಾಗ ಇವನ ರೂಮಿಗೆ ಬರುತ್ತಿವೆಯಂತೆ. ಬೆಳಗಿನಿಂದ ಸಂಜೆಯವರೆಗೆ ಕೋಣೆ ಯೊಳಗೆ ಸೇರಿಕೊಂಡು ಭೂತಕನ್ನಡಿಯ ಸಹಾಯದಿಂದ ಓಲೆಗರಿಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿರುತ್ತಾನಂತೆ ! ಯಾರೊಂದಿಗೂ ಸರಿಯಾಗಿ, ಮುಖ ಕೊಟ್ಟು ಮಾತನಾಡುವುದಿಲ್ಲವಂತೆ. ಊಟಕ್ಕೂ ಬಲವಂತ ಮಾಡ ಬೇಕಾಗಿದೆಯಂತೆ ! ಹೀಗಿರುವಲ್ಲಿ ಮೂರು ದಿನಗಳ ಹಿಂದೆ ಮನೆ ಬಿಟ್ಟು ಹೋದವನು ಇನ್ನೂ ಬಂದಿಲ್ಲವಂತೆ. ಪಾಪ, ಮುದುಕರು ಇದನ್ನು ಹೇಳುತ್ತ ಗೋಳಾಡುತ್ತಿದ್ದರು.

* * *

ಮತ್ತೆ ಹಲವು ದಿನಗಳ ನಂತರ........

ಅದೇ ಮುದುಕರು ಪೇಟೆಯಲ್ಲಿ ಸಿಕ್ಕಿ ನನ್ನ ಗುರುತು ಹಚ್ಚಿ ತಮ್ಮ ಮಗನ ಪತ್ತೆಯಾದುದಾಗಿ ತಿಳಿಸಿದರು. ಅವರು ಎಷ್ಟು ಹುಡುಕಿದರೂ ಆತ ಸಿಗಲಿಲ್ಲವಂತೆ. ಯಾರೊ ಬುದ್ಧಿವಂತರ ಸಲಹೆ ಮೇರೆಗೆ "ಓಲೆಗರಿಯೊಂದು ಸಿಕ್ಕಿದೆ. ಇಷ್ಟವಿದ್ದವರು ಈ ಕೆಳಗಿನ ವಿಳಾಸಕ್ಕೆ ಬಂದು ತೆಗೆದುಕೊಳ್ಳಬಹುದು" ಎಂದು ಜಾಹಿರಾತು ಹಾಕಿಸಿ, ಅದರ ಕೆಳಗೆ ತಮ್ಮ ಮನೆಯ ವಿಳಾಸವನ್ನೇ ಕೊಟ್ಟಿರಂತೆ. ಜಾಹಿರಾತು ಪ್ರಕಟವಾದ ದಿನದ ಸಂಜೆ ಯಾರೋ ಅವರ ಮನೆಯ ಕದವನ್ನು ತಟ್ಟಿದರಂತೆ. ಓಲೆಗರಿ ಹುಡುಕಿಕೊಂಡು ಯಾರೋ

ಬಂದಿರಬಹುದೆಂದುಕೊಂಡು ಬಾಗಿಲು ತೆರೆದಾಗ ಸಾಕ್ಷಾತ್ ಅವರ ಕುಮಾರ ಕಂಠೀರವನೇ ಬಂದಿದ್ದನಂತೆ.

ಅಷ್ಟು ದಿನಗಳು ಕುತೂಹಲರಾಯ ಎಲ್ಲಿದ್ದನೆಂಬ ನನ್ನ ಕುತೂಹಲದ ಪ್ರಶ್ನೆಗೆ ಅವರು ಆತ ಓರಿಯಂಟಲ್ ಲೈಬ್ರರಿಯಲ್ಲಿನ ಗ್ರಂಥಗಳ ನಡುವೆ ಕುಳಿತು ಗ್ರಂಥಾಂತರಂಗದಲ್ಲಿ ಲೀನನಾಗಿದ್ದನೆಂದೂ ಹೇಳಿದರು. ಈಗ ಆತ ನನ್ನ ಆಚೆ-ಈಚೆ ಬಿಡದೆ ಮನೆಯಲ್ಲೇ ಇರಿಸಿಕೊಂಡಿರುವುದಾಗಿಯೂ ಮನೆಯಲ್ಲಿದ್ದುಕೊಂಡು ಆತ ಏನು ಬೇಕಾದರೂ ಮಾಡಿಕೊಳ್ಳುವಂತೆ ಅವನಿಗೆ ತಿಳಿಸಿರುವುದಾಗಿಯೂ ಆ ಮುದುಕರು ತಿಳಿಸಿದರು.

*   *   *

ಇದಾದ ಬಹಳ ದಿನಗಳ ತನಕ ನನಗೆ ಕುತೂಹಲರಾಯನ ಸುದ್ದಿಯೇ ತಿಳಿಯಲಿಲ್ಲ. ಓದು (?) ಮುಗಿದ ಮೇಲೆ ದಿನಪತ್ರಿಕೆಯೊಂದರಲ್ಲಿ ಉಪಸಂಪಾದಕ (?) ನಾಗಿ ಸೇರಿಕೊಂಡೆ.

ಒಂದು ದಿನ ಆಫೀಸಿನ ವಿಳಾಸಕ್ಕೆ ಕುತೂಹಲರಾಯನಿಂದ ಕಾಗದ ಬಂದಿತ್ತು. ಅದರಲ್ಲಿ ಆತ ತಾನು ಅಲಂಕಾರ ಶಾಸ್ತ್ರದಲ್ಲಿ ಸಂಶೋಧನೆ ನಡೆಸಿರುವುದಾಗಿಯೂ ಆ ಬಗ್ಗೆ ಅನೇಕ ಲಕ್ಷಣ ಲೇಖನಗಳನ್ನು ಬರೆದಿರುವುದಾಗಿಯೂ ನಮ್ಮ ದಿನಪತ್ರಿಕೆಯ 'ಸಾಹಿತ್ಯ ವಿಭಾಗ'ದಲ್ಲಿ ಅವುಗಳನ್ನು ಪ್ರಕಟಿಸುವ ವ್ಯವಸ್ಥೆ ಮಾಡಬೇಕೆಂದೂ, ಸಾಧ್ಯವಾದರೆ ಸಂಭಾವನೆಯನ್ನೂ ಕೊಡಿಸಬೇಕೆಂದೂ, ಯಾರಿಗೂ ಸಂಭಾವನೆ ಕೊಡದಿದ್ದರೆ ತನಗೂ ಬೇಡವೆಂದೂ, ಯಾವುದಕ್ಕೂ ಕೂಡಲೆ ಜಬಾಬು ಬರೆಯಬೇಕೆಂದೂ ಬರೆದಿದ್ದ. ಆತ ತನ್ನ ಅಲಂಕಾರ ತಾನು ನೋಡಿಕೊಂಡರೆ ಸಾಕು, ಇನ್ನು ಸಾಹಿತ್ಯದ ಅಲಂಕಾರಕ್ಕೆ ಕೈಹಾಕಿದ್ದಾನೆಂದುಕೊಂಡು, ಅವನ ಪತ್ರಕ್ಕೆ ಉತ್ತರಿಸದೆ ಸುಮ್ಮನಿದ್ದೆ.

ಆ ಭೂಪ ನನ್ನ ಮೌನವನ್ನು ಸಮ್ಮತಿಯೆಂದೇ ಭಾವಿಸಿ ಮುಂದಿನ ಎಂಟು-ಹತ್ತು ದಿನಗಳಲ್ಲಿ ದೊಡ್ಡ ಜಾಕಾಯಿ ಪೆಟ್ಟಿಯೊಂದನ್ನು ರೈಲ್ವೆ ಪಾರ್ಸೆಲ್ಲಿನಲ್ಲಿ ನನ್ನ ಹೆಸರಿಗೆ ಕಳುಹಿಸಿದ್ದ. ಅದರ ಮೇಲೆ 'ಮ್ಯಾಟರ್ ಫಾರ್ ಪ್ರೆಸ್' ಎಂದಿತ್ತು. 'ಇಂದ-ವಿಳಾಸ' ಮೊದಲು ನೋಡದೆ ನಾನು ಅದು 'ಪ್ರಿಂಟಿಂಗ್ ಪೇಪರ್ ಬೇಲ್' ಎಂದು ಅದನ್ನು ನ್ಯೂಸ್‌ಪ್ರಿಂಟ್ ಇಲಾಖೆಗೆ

ಕಳುಹಿಸಿದೆ. ಇಷ್ಟೊಂದು 'ಪ್ರೆಸ್ ಮ್ಯಾಟರ'ನ್ನು ಪ್ರಕಾಶನಕ್ಕೆ ಕಳುಹಿಸಿ ಕೊಡುವವರಾರೆಂದು ನನ್ನ ವಾದ!

ಆದರೆ, ಖೋಟಾ ನಾಣ್ಯದಂತೆ, ಆ ಪೆಟ್ಟಿಗೆ ಪೇಪರ್ ಇಲಾಖೆಯಿಂದ ವಾಪಸು ಬಂದಿತು, ಅದು ಪ್ರಿಂಟಿಂಗ್ ಪೇಪರಲ್ಲವೆಂದೂ, 'ಮನುಸ್ಮೃತಿ' ಎಂದೂ ಹೇಳಲಾಯಿತು. ಅದನ್ನು ಆಗ ನಾನು 'ಶೂಲಂಕುಶ'ನಾಗಿ ನೋಡ ಬೇಕಾಯಿತು. ಅವು ಕುತೂಹಲರಾಯ ಬರೆದ ಅಲಂಕಾರ ಶಾಸ್ತ್ರ ಲೇಖನ ಮಾಲೆ. ಕಂತೆ ಕಂತೆಯಾಗಿ ಕಟ್ಟಿತ್ತು. ಪ್ರತಿಯೊಂದು ಕಂತೆಯೂ ಎರಡು ಕೈಲಿ ಎತ್ತಲಾರದಷ್ಟು ಭಾರವಾಗಿದ್ದು, ಬರಿಗಣ್ಣಲ್ಲಿ ಓದಲಾರದಷ್ಟು ಸಣ್ಣಕ್ಷರ ದಲ್ಲಿದ್ದುವು. ಅವನ್ನು ಎತ್ತುವಂತೆ ಆಳಿಗೆ ಹೇಳಿದೆ. ಆತ ಎರಡು ಕಂತೆಯನ್ನು ಒಟ್ಟಿಗೆ ಎತ್ತಲು ಹೋಗಿ ಕೆಳಗುರುಳಿದ; ಭಾರಕ್ಕೆ ಬೆನ್ನು ಉಳುಕಿತಂತೆ! ಮುಂದೆ ಇಬ್ಬಿಬ್ಬರು ಜೊತೆಯಾಗಿ ಎತ್ತಿದರೆನ್ನಿ........

* * *

ಸದ್ಯ, ಮಹಾರಾಯ ಪ್ರತಿಯೊಂದು ಕಂತೆಗೂ ತಲೆಬರಹ ಹಾಕಿದ್ದ. 'ಅಲಂಕಾರ ಮಣಿದರ್ಪಣ,' 'ಉಪಮಾ ಮಥನ ಚಂದ್ರಿಕಾ', 'ವಕ್ರಾಲಂ ಕಾರ ಸಂಪೂರ್ಣ ಪುರಾಣಂ' 'ಸರ್ವಾಲಂಕಾರ ಭದ್ರಂ', 'ವಿರೋಧಾಭಾಸ ಸಂಗ್ರಹಂ' 'ಅರ್ಥಾಂತರ ನ್ಯಾಸ ಚೂಡಾಮಣಿ' 'ಕಾವ್ಯಾಲಂಕಾರ ದರ್ಶನ' 'ಉಪಮೇಯ ದೀಪಿಕೆ' 'ಉತ್ಪ್ರೇಕ್ಷಾವಲ್ಲಭ ಮಂಜರಿ' ಇತ್ಯಾದಿ....ಇತ್ಯಾದಿ. ಕಂತೆಗಳ ಹೆಸರನ್ನೆಲ್ಲಾ ಒಂದೇ ದಿನದಲ್ಲಿ ಓದಿ ಮುಗಿಸಲಾಗುವುದಿಲ್ಲವೆಂದು ಕೊಂಡು ಕೈಲಿದ್ದ ಕೊನೆಯ ಕಂತೆಯನ್ನು ಮಾತ್ರ ನಿಲ್ಲಿಸಿಕೊಂಡು ಉಳಿದು ವನ್ನು ಮನೆಗೆ, ಹೇಗಾದರೂ ಮಾಡಿ ಸಾಗಿಸಬೇಕೆಂದು ಆಳುಗಳಿಗೆ ಹೇಳಿದೆ. ಆಗ ಒಂಭತ್ತು ಜನ ದೊಡ್ಡವರೂ ಮೂವರು ಹುಡುಗರೂ ಸೇರಿಕೊಂಡು ಆ ಪೆಟ್ಟಿಗೆಯನ್ನು ನನ್ನ ಕಣ್ಮುಂದಿನಿಂದ ಸಾಗಿಸಿದರು. 'ಉತ್ಪ್ರೇಕ್ಷಾವಲ್ಲಭ ಮಂಜರಿ' ಮಾತ್ರ ನನ್ನ ಬಳಿ ಉಳಿಯಿತು.

ಪಾಪ! ಕುತೂಹಲರಾಯ ಇಷ್ಟೊಂದು ಬರೆಯಲು ಎಷ್ಟು ಕಾಗದ ಖರ್ಚು ಮಾಡಿದ್ದಾನೆ, ಮಸಿ ಮುಗಿಸಿದ್ದಾನೆ, ಬೆರಳಿನಲ್ಲಿ ಬೆವರು ಸುರಿಸಿದ್ದಾನೆ, ಹರಿಸಿದ್ದಾನೆ, ನರವನ್ನು ನೋಯಿಸಿದ್ದಾನೆ, ತಲೆಯನ್ನು ತುರಿಸಿಕೊಂಡಿದ್ದಾನೆ. ಅವನ ಪ್ರಯತ್ನಕ್ಕಾದರೂ ಪ್ರತಿಫಲ ಸಿಗಲೆಂಬ 'ಲೋಕಮಾತ್ರ' ಉದ್ದೇಶ

ದಿಂದ, ಬಿಡುವು ಮಾಡಿಕೊಂಡು ಈ ಲೇಖನಗಳನ್ನೋದಿ ಆತನ ಸಾಹಸ ಪರಿಚಯ ಮಾಡಿಕೊಳ್ಳಬೇಕೆಂದು ನಿರ್ಧರಿಸಿದೆ.

* * *

ಈ ಮಹಾ ಸಂಶೋಧನ ರಾಮಾಯಣ ಅಥವಾ ಅಲಂಕಾರ ವಿವೇಚನ ಭಾಗವತವನ್ನು ತೆರೆದು ಗಡಿಯಾರದ ಕಡೆ ನೋಡಿದೆ. ಏಕೆಂದರೆ ಈ ಉದ್ಗ್ರಂಥ (ಉದ್ದವಾದ ಗ್ರಂಥ)ವನ್ನು ಓದಿ ಮುಗಿಸಲು ಎಷ್ಟು 'ಮಂಡಲ' ವಾಗುತ್ತವೆ ಎಂದು ಪರೀಕ್ಷಿಸುವುದು ಆಗತ್ಯವಾಗಿತ್ತು. ಇದನ್ನು ಓದಿ ಮುಗಿಸಲು ಇಷ್ಟು ದಿನಗಳಾಗುತ್ತೆ ಎಂದು ಲೇಖನದ ಶೀರ್ಷಿಕೆಯಡಿಯಲ್ಲಿ ಸೂಚಿಸಿದರೆ ಓದುಗರಿಗ ಅದನ್ನು ಓದಲು ಅಥವಾ ಬಿಡಲು ನಿರ್ಧರಿಸಲು ಅನುಕೂಲವಾಗುವುದು. ಅದರಲ್ಲೂ 'ಉತ್ಪ್ರೇಕ್ಷಾವಲ್ಲಭ ಮಂಜರಿ'ಯಂಥ ನೀಳ್ಗ್ರಂಥಕ್ಕೆ ಕಾಲದ ನಮೂದನೆ ಅನಿವಾರ್ಯವೆಂದು ನನಗನ್ನಿಸಿತು.

ನನ್ನ ಪಕ್ಕದಲ್ಲಿದ್ದ ಸಂಪಾದಕ ಗೆಳೆಯರು ನಾನು ಈ ಕಂತೆಯನ್ನು ಕೈಗೆತ್ತಿಕೊಂಡ ತಕ್ಷಣವೇ, ಈ 'ಬೃಹತ್-ಕಂತೆ'ಯನ್ನು ಒಂದೇ 'ಸಿಟಿಂಗ್' ನಲ್ಲಿ ಮುಗಿಸಿದರೆ ನೂರು ರೂಪಾಯಿ, ಎರಡು ಸಿಟಿಂಗ್ಸ್‌ನಲ್ಲಿ ಮುಗಿಸಿದರೆ ಐವತ್ತು ರೂಪಾಯಿ ಎಂದು 'ಬಾಜಿ' ಕಟ್ಟ ತೊಡಗಿದರು. ಇದನ್ನು ಓದಿ ಮುಗಿಸುವಷ್ಟರಲ್ಲಿ ನನ್ನ ಗಡ್ಡಮೀಸೆಗಳು ಕಾಲಿನ ಹೆಬ್ಬೆರಳು ದಾಟಿ, ನೆಲ ಮುಟ್ಟಿ ನಿಲ್ಲುವುವೆಂದೂ, ಮತ್ತೆ ಕೆಲವರು ಈಗಲೇ ಆಂಬ್ಯುಲೆನ್ಸ್‌ಗೆ ಫೋನ್ ಮಾಡಿದ್ದರೆ ಒಳ್ಳೆಯದೆಂದೂ ಇದನ್ನು ಓದಿ ಮುಗಿಸಿದ ನಂತರ ಅವರನ್ನು ಆಸ್ಪತ್ರೆ (?) ಗೆ ಸೇರಿಸಲು ಅನುಕೂಲವಾಗುವುದೆಂದೂ ಸೂಚಿಸಿದರು. ಇನ್ನು ಕೆಲವರು, "ಹುಚ್ಚು ಹಿಡಿಯೋದೇನು ಬಂತು, ಇದನ್ನು ಓದಿ ಮುಗಿಸಿದ ನಂತರ ಅವರು ಬದುಕಿದ್ದರೆ ತಾನೇ ಹುಚ್ಚು ಹಿಡಿಯೋದು" ಎಂದು ಅನುಮಾನಿಸಿದರು. ಅವರಲ್ಲೊಬ್ಬರು ನನ್ನ ಕೈಲಿದ್ದ ಕಂತೆಯನ್ನು ಕಿತ್ತುಕೊಂಡು —"ನಾನೊಂದು ನೀಳ್ಗ್ರಂಥ ಪಠಣಕ್ಕೆ ಕೈಹಚ್ಚಿದ್ದೇನೆ. ಅದನ್ನು ಮುಗಿಸುವವರೆಗೂ, ಅಂದರೆ ಮೂರುದಿನಗಳವರೆಗೂ ಮನೆಗೆ ಬರುವುದಿಲ್ಲವೆಂದು ಆಳಿನ ಕೈಲಿ ಹೇಳಿ ಕಳುಹಿಸಿಬಿಡಿ, ಮನೆಗೆ. ಪಾಪ! ಮನೆಯವರೇಕೆ ಅಹೋರಾತ್ರಿ ನಿಮ್ಮ ದಾರಿ ಕಾಯುತ್ತಿರಬೇಕು"–ಎಂದು ಪೀಡಿಸಿದರು. ಮತ್ತೊಬ್ಬರು

ಅದನ್ನು ಕೈಗೆತ್ತಿಕೊಂಡು ಆಂಜನೇಯ, ಲಕ್ಷ್ಮಣನು ಮೂರ್ಛೆ ಬಿದ್ದಿದ್ದಾಗ ತಂದಿದ್ದ ಸಂಜೀವಿನಿ ಬೆಟ್ಟಕ್ಕೆ ಹೋಲಿಸಿದರು... ಮತ್ತೆ ಕೆಲವರು ವಿಂಧ್ಯ ಪರ್ವತಕ್ಕೆ ಹೋಲಿಸಿದರು ; ಮೇರು ಪರ್ವತಕ್ಕೆ ಹೋಲಿಸಿದರು. "ದೇವಾಸುರರು ಅಮೃತ ಮಥನಕ್ಕೆ ಮೇರು ಪರ್ವತದ ಬದಲು ಈ ಗ್ರಂಥವನ್ನು ಹಾಕಿಕೊಂಡಿದ್ದರೆ ಅಮೃತ ಇನ್ನೂ ಬೇಗ ಬರುತ್ತಿತ್ತು"—ಎಂದರು.

ಪತ್ರಿಕಾ ಕಛೇರಿಯ 'ಇಂದಾ-ಗೆ' ಗುಮಾಸ್ತರೂ ಇದರಲ್ಲಿ ಭಾಗವಹಿಸಿ ಇದು ಪತ್ರಿಕಾ ಕಛೇರಿಯಲ್ಲಿರುವ ಎಲ್ಲಾ ಹಳೆಯ ರಿಕಾರ್ಡುಗಳನ್ನು ಒಟ್ಟಿಗೆ ಸೇರಿಸಿ ತಂತಿಗಳಿಂದ ಬಿಗಿದು ಎತ್ತಿದಷ್ಟು ತೂಕವಿದೆ ಎಂದರು. ಕಂಪಾಜಿಟರುಗಳು 'ಲಾಕ್' ಆದ ಡೆಮ್ಮಿಯಾಕಾರದ ನಾಲ್ಕು ಪುಟಗಳ 'ಫಾರಂ' ತೂಕಕ್ಕೆ ಹೋಲಿಸಿದರು. ಮೆಷಿನ್‌ಮ್ಯಾನ್ ಸಹ, ಇದೊಂದು ಸಿಲಿಂಡರ್ ತೂಕವಿದೆಯೆಂದು ಅಂದಾಜು ಮಾಡಿದ.

ನಾನು ಅವರ ಕೈಯಿಂದ ಅದನ್ನು ಕಿತ್ತುಕೊಂಡು, ಅಪಹಾಸ್ಯ ಸಾಕೆಂದು ಹೇಳಿದೆ. ಕಿತ್ತುಕೊಂಡ ರಭಸಕ್ಕೆ ನನ್ನ ಮುಂಗೈ ಉಳುಕಿತು. ಆದರೆ ಅದನ್ನು ಹೇಳಿಕೊಳ್ಳಲಿಲ್ಲ.

ಈ ಸಂಶೋಧನ 'ಲೇಖನಗುಚ್ಛ'ವನ್ನು ಕಛೇರಿಯಲ್ಲಿ ಓದಲಾಗುವುದಿಲ್ಲವೆಂದೂ ಮನೆಗೆ ತೆಗೆದುಕೊಂಡು ಹೋಗಿ ಅಲ್ಲಿ ಬಿಡುವು ದೊರೆತಾಗಲೆಲ್ಲ ಓದಬೇಕೆಂದು ನಿರ್ಧರಿಸಿದೆ. ಈ ನನ್ನ ನಿರ್ಧಾರವನ್ನು ತಿಳಿದ ನನ್ನ ಸಹೋದ್ಯೋಗಿಗಳು ಪುನಃ ಪರಿಹಾಸ್ಯ ಮಾಡಿದರು. ಈ ಕಂತೆಯನ್ನು ನನ್ನ ಸೈಕಲ್ಲಿನ ಹಿಂದೆ ಕಟ್ಟಿ ಬಂದ ಜವಾನ "ಸಾರ್, ಸೈಕಲ್ಲಿಗೆ ಬ್ಲೋ ಸಾಲದು, ಹೊಡಸಿಕೊಂಡು ಬರಬೇಕು"—ಎಂದ.

* * *

"ಭರತ ಖಂಡದಲ್ಲಿ ಕಾವ್ಯ ಹುಟ್ಟಿದ್ದು ಯಾವಾಗ ? ಏಕೆ ಹುಟ್ಟಿತು ? ಅಲಂಕಾರ ಶಾಸ್ತ್ರ ಹುಟ್ಟಿದ್ದು ಯಾವಾಗ ? ಏಕೆ ಹುಟ್ಟಿದ್ದು ? ಇವುಗಳನ್ನು 'ಹುಟ್ಟುಹಾಕಿದ್ದು' ಯಾರು ? ಯಾತಕ್ಕಾಗಿ 'ಹುಟ್ಟು' ಹಾಕಿದರು ? ಎಂಬೀ ವಿಷಯಗಳು ಇನ್ನೂ ಖಚಿತವಾಗಿ ನಿರ್ಧರವಾಗಿಲ್ಲ. ಹಾಗೇ ಉತ್ಪ್ರೇಕ್ಷೆಯು ಉದ್ಭವಿಸಿದ ಕಾಲ, ದೇಶ, ವರ್ತಮಾನ, ಸನ್ನಿವೇಶಗಳೂ ಇನ್ನೂ ತೀರ್ಮಾನವಾಗಿಲ್ಲ. ಒಂದೆರಡು ಸಾರಿ ಪಂಡಿತೋತ್ತಮರು ಹಾಗೂ ವಿದ್ವಾಂಸರು ಇದನ್ನು

ನಿರ್ಧರಿಸಲೋಸುಗ ಒಂದು ಸಮಾಲೋಚನೆ ನಡಸಿ, ಅದರಲ್ಲಿ ಭಯಂಕರ ಜಗಳವಾಗಿ ಕೊನೆಗೆ ಓಲೆಗರಿಗಳಲ್ಲೇ ಹೊಡೆದಾಟವಾಗಿ ಸಭೆ ಭರಖಾಸ್ತಾಯಿತು. ಈ ಸುದ್ದಿಯನ್ನು ಪತ್ರಿಕೆಗಳು 'ಪಂಡಿತರ ಪುಂಡಾಟ'ವೆಂದು ಬಣ್ಣ ಕೊಟ್ಟು ವರ್ಣಿಸಿದರು! ಆ ಪಂಡಿತೋತ್ತಮರುಗಳೆಲ್ಲ ಈಗಲೂ ಒಬ್ಬರನ್ನೊಬ್ಬರು ದ್ವೇಷಿಸಹತ್ತಿದ್ದಾರೆ. ಆದರೂ ಅನೇಕ ವಿದ್ವಾಂಸರು ಶಿಲಾಶಾಸನ, ತಾಮ್ರದ ನಾಣ್ಯ, ಓಲೆಗರಿ, ಹಳೆಯ ಮುದುಕರು ಇವರುಗಳನ್ನು ಹಿಡಿದು ಸಾಧ್ಯವಾದಷ್ಟು ಇನ್ನೂ ವಿಷಯ ಸಂಗ್ರಹ ಮಾಡುತ್ತಲೇ ಇದ್ದಾರೆಂದು ತಿಳಿದುಬಂದಿದೆ.

ಉತ್ಪ್ರೇಕ್ಷೆ ಎಂದರೆ, ಇಲ್ಲದೆ ಇರುವುದನ್ನು ಇದ್ದಂತೆ ವರ್ಣಿಸುವುದು, ಇರುವುದನ್ನು ಇಲ್ಲದಂತೆ ವರ್ಣಿಸುವುದು. ಒಂದು ಪದಾರ್ಥವನ್ನು ಮತ್ತೊಂದು ಪದಾರ್ಥವನ್ನಾಗಿ ಸಂಭಾವನೆ ಮಾಡುವುದು. ಒಬ್ಬಾನೊಬ್ಬ ಮನುಷ್ಯನನ್ನು ಮತ್ತೊಂದು ವಸ್ತುವಿಗೊ ಪ್ರಾಣಿಗೊ ಹೋಲಿಸಿ ಆ ಪ್ರಾಣಿಯೇ ಮನುಷ್ಯನೆನ್ನುವುದು, ಪ್ರಾಣಿಯನ್ನೊ ವಸ್ತುವನ್ನೊ ಮನುಷ್ಯನಿಗೆ ಹೋಲಿಸುವುದು....

ಉತ್ಪ್ರೇಕ್ಷ ಎಂಬ ಶಬ್ದದ ವ್ಯುತ್ಪತ್ತಿ—ಹೀಗೂ ಇರಬಹುದು : ಉತ್- ಅಂದರೆ, ಉತ್ಪತ್ತಿ ಅರ್ಥಾತ್ ಸೃಷ್ಟಿ ಮಾಡಿದ್ದು ಯಾ ಊಹಿಸಿದ್ದು, ಇಲ್ಲಿ ಏನನ್ನು ಅಥವಾ ಯಾವುದನ್ನು ಅನ್ನುವುದು ಬಿಟ್ಟುಹೋಗಿದೆ. ಅದನ್ನು ಸೇರಿಸಿಕೊಂಡು ಯಾರು ಎಂಬ ಪ್ರಶ್ನೆ ಹಾಕಿಕೊಂಡರೆ, ಪ್ರೇಕ್ಷ ಎಂಬ ಉತ್ತರ ಬರುತ್ತದೆ. ಈ 'ಪ್ರೇಕ್ಷ' ಎಂಬುದು 'ಪ್ರೇಕ್ಷಕ'-ಎಂಬುದರ ಲಘುರೂಪವಿರಬಹುದೇ ಎಂಬ ಅನುಮಾನ ಬರುತ್ತದೆ. ಈ ಅನುಮಾನದ ಒರೆಯಲ್ಲಿ ಈ ಶಬ್ದವನ್ನು ಉಜ್ಜಿ ಉಜ್ಜಿ ನೋಡಿದಾಗ, ಉತ್—ಪ್ರೇಕ್ಷಕ ಈ ಎರಡೂ ಸೇರಿಕೊಂಡು ಪ್ರೇಕ್ಷಕ ಉತ್ಪತ್ತಿ ಮಾಡಿದ್ದು, ಪ್ರೇಕ್ಷಕ ಸೃಷ್ಟಿ ಮಾಡಿದ್ದು ಎಂದು ಅರ್ಥಮಾಡಲು ಬರುತ್ತದೆ. ಅದನ್ನು ಇನ್ನೂ ಕೊಂಚ ವಿಸ್ತರಿಸಿ 'ಸಾಲುಗಳೊಳ ನಡುವೆ' (in between the lines) ಓದಿದಾಗ: ಪ್ರೇಕ್ಷಕ ಪ್ರತ್ಯಕ್ಷವಾಗಿ ಏನು ನೋಡಿದನೊ ಅದನ್ನು ಬಿಟ್ಟು ಇನ್ನೊಂದನ್ನು ಉತ್ಪತ್ತಿ ಯಾ ಸೃಷ್ಟಿಮಾಡಿ ಯಾ ಊಹಿಸಿ ಹೇಳುವುದು ಎಂಬರ್ಥ ನಿಲ್ಲುತ್ತದೆ. ಈ 'ಉತ್-ಪ್ರೇಕ್ಷಕ'-ವೇ ದಿನಗಳೆದಂತೆ ಮಾಗಿ ಹಣ್ಣಾಗಿ ಕೊನೆಯ 'ಕ' ಕಳಚಿಬಿದ್ದು

'ಉತ್-ಪ್ರೇಕ್ಷ'ವಾಗಿರಬಹುದು. ಅದೇ ಕಾಲಕ್ರಮದಲ್ಲಿ 'ಉತ್ಪ್ರೇಕ್ಷೆ'ಯಾಗಿ ಬಳಕೆಗೆ ಬಂದಿರಬಹುದು.

ಅದಿಲ್ಲವಾದರೆ, ಸಾಮಾನ್ಯ ಪ್ರೇಕ್ಷಕರು ಉಪೇಕ್ಷೆ ಮಾಡಿದ್ದನ್ನು ಕಂಡು, ತಿಳಿದು, ತಿಳಿಯ ಹೇಳಿದಲ್ಲಿ ಆ ಉಪೇಕ್ಷೆಗೇ ಉತ್ಪ್ರೇಕ್ಷೆ ಎಂಬ ಹೆಸರು ಬಂದಿರಲೂ ಸಾಕು. ಅನೇಕ ಪಂಡಿತೋತ್ತಮರೂ ವಿದ್ವಾಂಸರೂ ಈ ಶಬ್ದದ ವ್ಯುತ್ಪತ್ತಿಯ ಮೇಲೆ 'ದಂ-ಶೋಧನೆ' ಮಾಡುತ್ತಿರುವುದರಿಂದ ಯಾವುದನ್ನೂ ಖಚಿತವಾಗಿ, ಆಧಾರವತ್ತಾಗಿ ಹೇಳಿ ತಲೆ ಉಳಿಸಿಕೊಂಡಿರುವಂತಿಲ್ಲ !

ಉತ್ಪ್ರೇಕ್ಷೆಗಳಲ್ಲಿ ವಸ್ತುಉತ್ಪ್ರೇಕ್ಷೆ, ಸ್ವರೂಪೋತ್ಪ್ರೇಕ್ಷೆ, ಗುಣೋತ್ಪ್ರೇಕ್ಷೆ ಎಂಬ ವಿಭೇದಗಳಿವೆ. ಅವಲ್ಲದೆ ಅನೇಕ ಒಳಭೇದಗಳೂ ತಳಭೇದಗಳೂ ಮತಭೇದಗಳೂ ಇವೆ. ಅವುಗಳನ್ನು ನಿರ್ಧರಿಸುವುದಕ್ಕೆ ಮತ್ತೊಂದು ಗುಂಪಿನ ಪಂಡಿತೋತ್ತಮರೂ ವಿದ್ವಾಂಸರೂ ಸಮಾವೇಶವೊಂದನ್ನು ಕರೆದಿದ್ದರು. ಈ ಸುದ್ದಿ ತಿಳಿದ ಪೋಲೀಸ್ ಇಲಾಖೆಯವರು ಆ ದಿನ ಸಶಸ್ತ್ರ ಪೋಲೀಸ್ ಪಹರೆ ಹಾಕಿ ನೂರ ನಲವತ್ತ ನಾಲ್ಕನೆಯ ಸೆಕ್ಷನ್ ವಿಧಿಸಿದರಂತೆ !

* * *

ಉತ್ಪ್ರೇಕ್ಷೆ ಮಾಡುವುದೂ, ಉತ್ಪ್ರೇಕ್ಷೆ ಮಾಡಿದ್ದನ್ನು ಕೇಳುವುದೂ, ಕೇಳಿ ಸಂತೋಷಪಡುವುದೂ ಹುಡುಗರಿಂದ ಹಿಡಿದು ವೃದ್ಧರವರೆಗೂ ಇಷ್ಟ. ಸಾಹಿತಿಗಳಿಗೂ ಕವಿಗಳಿಗೂ ಇದು ಬಹಳ ಪ್ರಿಯವಾದುದು. ಸಾಹಿತ್ಯದ ಇನ್ನಾವ ಅಲಂಕಾರಕ್ಕೂ ಇರದ ಬೆಲೆ ಈ ಉತ್ಪ್ರೇಕ್ಷೆಗಿದೆ. ಎಲ್ಲರೂ ಇದನ್ನು ಅರಿತು, ಬಳಸುವುದರಲ್ಲಿ ನುರಿತಿದ್ದಾರೆ. ಅದರ ಉಪಯೋಗ ಅಷ್ಟರಮಟ್ಟಿಗೆ ಸರ್ವವ್ಯಾಪಿಯಾಗಿದೆ.

ಬೆಳಗಾದರೆ, ಒಂದು ಸಂಸಾರದಲ್ಲಿ ಉತ್ಪ್ರೇಕ್ಷೆಯ ಅವಶ್ಯಕತೆಯಿದೆ. ಉತ್ಪ್ರೇಕ್ಷೆಯಿಂದಲೇ ಎಲ್ಲಾ ಕೆಲಸಗಳು.

"ಏಳ್ರೀ... ಹತ್ತುಗಂಟೆಯಾಯಿತು, ಏನ್ರೀ ಕುಂಭಕರ್ಣನ ಹಾಗೆ ಮಲಗಿದ್ದೀರೆಲ್ರಿ. ಹೆಬ್ಬಾವಿನ ಹಾಗೆ ಬಿದ್ದಿದ್ದೀರೆಲ್ರಿ"—ಇತ್ಯಾದಿ ಹೇಳುವವರೆಗೂ ಯಜಮಾನ ಹಾಸಿಗೆ ಬಿಟ್ಟು ಮೇಲೇಳುವುದೇ ಇಲ್ಲ. ಮಕ್ಕಳನ್ನು ಅವು ಎಷ್ಟೇ ದಡ್ಡ ಶಿಖಾಮಣಿಗಳಾಗಿದ್ದರೂ, ಜಾಣ, ಗಿಣಿ, ಇತ್ಯಾದಿ ಶಬ್ದಗಳಿಂದ ಹೊಗಳದ ಹೊರತು ಪುಸ್ತಕಗಳನ್ನು ಮುಟ್ಟುವುದಿಲ್ಲ, ಶಾಲೆಗೆ ಹೋಗು

ವುದಿಲ್ಲ, ಹೇಳಿದ ಮಾತನ್ನು ಕೇಳುವುದಿಲ್ಲ. ಹೆಂಡತಿ ಎಷ್ಟೇ ಕುರೂಪಿಯಾಗಿರಲಿ, "ಚಿನ್ನ....ರನ್ನ....ಇಂದುವದನೆ, ನಳಿನಾಕ್ಷಿ, ಶಿರೀಷ ಸೊಂಟೆ" ಎನ್ನಬೇಕು. "ಆರು ವರ್ಷ ಒಂದೇ ಸಮನೆ ಹುಡುಕಿದೆ ನಿನ್ನಂಥ ಹೆಣ್ಣನ್ನು ಪತ್ತೆ ಹಚ್ಚಲು. ನಿನ್ನ ಗುಣ, ನಿನ್ನ ರೂಪು, ನಿನ್ನ ಘನತೆ, ನಿನ್ನ ನಡತೆ ಆಹಾ... ಆ ಸೀತಾ ಸಾವಿತ್ರಿಯರಿಗೂ ಇರಲಿಲ್ಲವೆಂದೇ ನನ್ನ ಭಾವನೆ."—ಎಂದು ನೋಡಿ, ಮಿಂಚಿನ ವೇಗದಲ್ಲಿ ಸ್ಪೆಷಲ್ ಕಾಫಿ, ತಿಂಡಿ ತಯಾರಾಗಿ ನಿಮ್ಮ ಪಾದದ ಬಳಿ ಆವಿಯಾಡುತ್ತವೆ.

"ಎಂಥಾ ಜಾಣ್ರೇ ನೀವು . ಅಲ್ಲ, ನನಗೆ ಹೇಳಲೇಬೇಡ್ವೆ? ಗುಟ್ಟು ಗುಟ್ಟಾಗೇ ಇಟ್ಟಿದ್ದೀರೆಲ್ಲಾ ಎಲ್ಲಾನೂವೇ? ನಿಮ್ಮ ಸಮಾನ ಇಲ್ರಿ... .ಅದಕ್ಕೇ ನಮ್ಮಪ್ಪ ನಿಮ್ಮನ್ನೇ ಚುನಾಯಿಸಿದ್ದು. ಭೇಷ್. ಪರವಾಯಿಲ್ಲ ಅಂತೂ 'ಅಲೋಕೇಷನ್' ದುಡ್ಡು ನಾಳೇನೆ ಬರುತ್ತೆ ಅನ್ನಿ" ಎಂದು ಹೊಗಳುತ್ತ ಒಂದು ಸೀರೆಗೆ ದುಡ್ಡು 'ಬಂದೋಬಸ್ತು' ಮಾಡ್ಕೊತಾಳೆ ಹೆಂಡತಿ. ನಿಮ್ಮನ್ನು ಅಷ್ಟು ಹೊಗಳದಿದ್ದರೆ ನೀವಂತೂ ಒಂದು ಕಾಸೂ ಬಿಚ್ಚುತ್ತಿರಲಿಲ್ಲ.

ಮನೆಯ ಮುದುಕಿಗೆ: "ನಿಮ್ಮ ಶಕ್ತಿಗೇನು ಕೊಟ್ಟರೂ ತೀರದು ಅಜ್ಜಿ. ಈಗಿನ ಕಾಲದವರ ಕೈಲಿ ಈ ಕೆಲಸ ಸತ್ತರೂ ಆಗೊಲ್ಲ. ನಾವೂ ಇದ್ದೇವೆ. ಏತಕ್ಕೆ! ನಿಮಗೆ ವಯಸ್ಸು ಆಗ್ತಾ ಆಗ್ತಾ ಪ್ರಾಯ ಬರ್ತಾ ಇದೆ."—ಎಂದು ಬಿಡಿ, ಸಾಕು. ಅಜ್ಜಿ ಒಬ್ಬರೇ ನಡೆಸಿಬಿಡ್ತಾರೆ, ಮನೆಗೆಲಸಗಳನ್ನೆಲ್ಲಾ.

ಇನ್ನು ಮುದುಕರೂ ಅಷ್ಟೆ: "ಬಿ.ಎ. ಪ್ಯಾಸ್ ಮಾಡದಿದ್ದರೂ ನಿಮ್ಮ ಅನುಭವದ ಮುಂದೆ... ಏನು ಕೊಟ್ಟರೂ ತೀರದು. ನಿಮ್ಮ ಬುದ್ಧಿ ಶಕ್ತಿಗೆ ನಿಮ್ಮ ನರೆತ ಗಡ್ಡವೇ ಸಾಕ್ಷಿ." ಹಾಗೆ ಹೀಗೆ ಹೇಳಿಬಿಡಿ. ಆಗ ನೋಡಿ ಅವರ ಹಿಗ್ಗನ್ನು.

ಪ್ರಾಚೀನ ಸಾಹಿತ್ಯದಲ್ಲಂತೂ ಉತ್ಪ್ರೇಕ್ಷೆ ಉನ್ನತ ಸ್ಥಾನ ಗಳಿಸಿ ಮತ್ತಾವುದಕ್ಕೂ ಎಡೆಬಿಡದಂತೆ ಕೂತಿದೆ. ದೇವತಾ ಪ್ರಾರ್ಥನೆಯಲ್ಲಿ ಕಾಣಿಸಿಕೊಂಡ ಉತ್ಪ್ರೇಕ್ಷೆ ಕಾವ್ಯದ ಕೊನೆಯಲ್ಲಿ ಕೈಬಿಡುತ್ತದೆ. ಕಾವ್ಯದ ನಾಯಕ, ರಾಜ, ಅವನ ಆಸ್ಥಾನದ ಭಟ್ಟಂಗಿಗಳು, ಕವಿಗಳು, ಕಲಾವಿದರು ಇವರೆಲ್ಲರ ಕೆಲಸ ರಾಜನನ್ನು, ಅವನ ಪರಿವಾರವನ್ನು, ಅವನ ಆಡಳಿತವನ್ನು ಉತ್ಪ್ರೇಕ್ಷೆ ಮಾಡು

ವುದೇ ಆಗಿದೆ. ರಾಜಾಧಿರಾಜರ, ರಾಣಿ ಅಧಿರಾಣಿಯರ, ರಾಜಕುಮಾರ ಅಧಿ ರಾಜಕುಮಾರರ ಗುಣಗಾನದಲ್ಲಿ ಕಾಲ ಕಳೆಯುವುದು ಅವರ ಪರಿವಾರ.

ರಾಜಕುಮಾರ ಅರವತ್ತುನಾಲ್ಕು ವಿದ್ಯೆಗಳನ್ನು, ಕೇವಲ ಒಂದೆರಡು ವರ್ಷಗಳಲ್ಲಿ ಅರೆದು ಕುಡಿದ ಅನ್ನುತ್ತಾರೆ. ವಾಸ್ತವವಾಗಿ, ರಾಜಕುಮಾರ ಅರವತ್ನಾಲ್ಕು ಅಕ್ಷರಗಳನ್ನು ಆರು ವರ್ಷದಿಂದಲೂ ತಿದ್ದುತ್ತಿರುತ್ತಾನೆ. ಮಂತ್ರಿ ಕುಮಾರನ ಜೊತೆಯಿಲ್ಲದೆ ಹೊಸಲು ದಾಟಲು ಸಹ ಧೈರ್ಯವಿಲ್ಲದ ರಾಜ ಕುಮಾರನನ್ನು ಆತ ಸಿಂಹದ ಕೂಡ ಸರಸವಾಡಿದ, ಹುಲಿಯ ಕೂಡ ಗುದ್ದಾಡಿದ, ಕರಡಿಯ ಕೂಡ ಕಾದಾಡಿದ, ಕಿರುಬನ ಕೂಡ ಕಿತ್ತಾಡಿದ ಇತ್ಯಾದಿ ಇತ್ಯಾದಿ ವರ್ಣಿಸುವುದರ ಅರ್ಥವೇನು ?

ಇನ್ನು ನಿತ್ಯಗನ್ನಡಕ್ಕೆ ಬಂದರೆ—ಉತ್ಪ್ರೇಕ್ಷೆಯೇ ಅದರ ಜೀವನಾಡಿ. ಪತ್ರಿಕಾ ವರದಿಗಳು, ಭಿನ್ನವತ್ತಳೆಗಳು, ಸ್ವಾಗತ ಗೀತೆಗಳು, ಪುಸ್ತಕ ವಿಮರ್ಶೆಗಳು.ಲೇಖನಗಳು ಸಿಂಹಾವಲೋಕನಗಳು ಇವೆಲ್ಲಕ್ಕೂ ಉತ್ಪ್ರೇಕ್ಷೆಯೇ ಬುನಾದಿ.

ನಿಮ್ಮ ಸಲಹೆ ಅತ್ಯಮೋಘ, ನಿಮ್ಮ ಸೂಚನೆಗೆ ನನ್ನ ಅಭಿವಾದನಗಳು, ನಿಮ್ಮ ಭಾಷಣ ಅಕ್ಷರಶಃ ಅನುಕರಣೀಯ, ನಿಮ್ಮ ಧೈರ್ಯ ಧ್ಯೇಯ ಪೂರ್ಣ... ಇತ್ಯಾದಿ ಮಾತುಗಳನ್ನು ಎಷ್ಟು ಹೆಚ್ಚಾಗಿ ಬಳಸಿದರೆ ಅಷ್ಟು ಅನುಕೂಲ! ಮೇಲಧಿಕಾರಿಯ ಮಗ ಶುದ್ಧ ಶುಂಠೀಕಾಯಿಯಾಗಿದ್ದರೂ ಆತ 'ತುಂಬಾ ಚುರುಕು .. ಬೆರಳು ತೋರಿಸಿದರೆ ಹಸ್ತ ನುಂಗುತ್ತಾನೆ' ಎನ್ನಬೇಕು. ನಿಜವಾಗಿ ನೋಡಿದರೆ, ಆ ಹುಡುಗ ನೀವು ಬೆರಳು ತೋರಿಸಿದರೆ ಇನ್ನೊಬ್ಬರ ಹಸ್ತ ನುಂಗುವುದಕ್ಕೆ ಹೋಗುವಂಥವನಿರುತ್ತಾನೆ !

* * *

ಕುತೂಹಲರಾಯನ ಈ ಲೇಖನ ವಾಹಿನಿಯನ್ನು ಓದುತ್ತ ಹೋದ ಹಾಗೆ ಬೆಳಕು ಹರಿಯಿತು. ನನ್ನಾಕೆ ಕಣ್ಣುಬಿಟ್ಟು ನೋಡಿ 'ಏನ್ರಿ, ಇನ್ನೂ ಓದ್ತಾ ಇದ್ದೀರಾ.. ನಿಮಗೇನು ಹುಚ್ಚು ಹಿಡೀತೆ ?'—ಎಂದು ಕೇಳಿದಳು. ನಾನು ಮೌನದಿಂದ ಓದು ಮುಂದುವರಿಸಿದೆ. ಆಕೆ 'ನೀವು ಹೀಗೆ ಓದ್ತಾ ಹೋದ್ರೆ....ನೀವೂ ಕುತೂಹಲರಾಯನ ಹಾಗೆ ಆಗ್ತೀರಿ, ನೋಡ್ತಿರಿ' ಎಂದಳು. 'ಹಾಗೇನಿಲ್ಲ'—ಎಂದುಕೊಂಡು ನಾನು ಅಲ್ಲಿಗೆ ಓದು ನಿಲ್ಲಿಸಿ, ಪತ್ರಿಕಾ ಕಛೇ

ರಿಗೆ ಹೋಗಲು ಅಣಿ ಮಾಡಿಕೊಂಡೆ. ಸಂಜೆ ಕೂತು, ಆ ಕಂತೆಯನ್ನು ಕೂನೆಗಾಣಿಸಬೇಕೆಂದು ನಿರ್ಧರಿಸಿಕೊಂಡು ಮನೆಯಿಂದ ಹೊರಟೆ.

ಆದರೆ ಸಂಜೆ ಮನೆಗೆ ಬಂದು ನೋಡುವಲ್ಲಿ ಆ ಕಂತೆಯೇ ಪತ್ತೆಯಿರಲಿಲ್ಲ. ನನ್ನ ಹೆಂಡತಿಯನ್ನು ಕೇಳಿದೆ 'ನನಗೊಂದೂ ಗೊತ್ತಿಲ್ಲ'ವೆಂದು ನಿರರ್ಗಳವಾಗಿ ಹೇಳಿದಳು. ಅವಳೇ ಏನೋ ಮಾಡಿದಾಳೆಂದು ನನಗೆ ಗುಮಾನಿ. ಈಗಲೂ ಕೇಳ್ತಾ ಇದೇನೆ 'ಕೊಡೆ ಅದನ್ನ .. ಕುತೂಹಲರಾಯ ಬಹಾಳ ಕಷ್ಟಪಟ್ಟು ಬರ್ದಿದಾನೆ' ಅಂತ. ಅವಳು ಈ ಸುದ್ದಿ ಎತ್ತಿದರೆ ಸಾಕು ಬ್ರೇಕಿಲ್ಲದ ಜೀಪಿನಂತೆ ಮೇಲೇ ಬರುತ್ತಾಳೆ.

ಇನ್ನೇನಿಲ್ಲ.. ಆ ದಿನ ಮನೆಯಲ್ಲಿ ಸೌದೆಯಿರಲಿಲ್ಲ. ಆ ಕಂತೆಯನ್ನೇನಾದರೂ ಒಲೆಗೆ ಉಪಯೋಗಿಸಿಬಿಟ್ಟಳೋ ಎಂದು ನನಗೆ ಅನುಮಾನ!

# ಕೊನೆಗೂ ಸೋತೆ !

"ಅದಿರಲಿ, ನೀವು ಮನೆಗೆ ಬಂದ್ರೆಲ್ಲಾ... ಆಗ ಏನು ನೋಡಿದ್ರಿ, ಹೇಳಿ ಮತ್ತೆ,"–ಎಂದಳು ಶಾರಿ ತನ್ನ ಸಹಜ ವೈಯಾರದಿಂದ.

ನಮ್ಮ ಶಾರಿ ಚರಿತ್ರೆ ಮೇಸ್ಟ್ರು ಮಗಳು. ಅವಳ ತಂದೆಗೆ ಪ್ರಶ್ನೋಪಾಧ್ಯಾಯರೆಂದು ಅಡ್ಡಹೆಸರು. ಪಾಠವನ್ನು ಪ್ರಶ್ನೆಗಳ ರೂಪದಲ್ಲಿ ಅಥವಾ ಪ್ರಶ್ನೆಗಳನ್ನು ಪಾಠದ ರೂಪದಲ್ಲಿ ಹೇಳುವುದರಲ್ಲಿ ಅವರು ಹೆಸರುವಾಸಿ.

"ಶಿವಾಜಿ ಎಲ್ಲಿ ಹುಟ್ಟಿದ?"–ಎಂದು ಅವರು ಕೇಳಿದಾಗ "ಪುಣೇಲಿ" ಎಂದು ಯಾರಾದರೂ ಹುಡುಗ ಉತ್ತರಿಸಲೇಬೇಕು. ಅದುವರೆಗೂ ಅವರು ಆ ಪ್ರಶ್ನೆಯನ್ನು ಕೇಳುತ್ತಲೇ ಇರುತ್ತಾರೆ ಹೊರತು ಮುಂದಕ್ಕೆ ಹೋಗುವುದಿಲ್ಲ.

ಮನೆಯಲ್ಲಿಯೂ ಅಷ್ಟೆ! ಅಭ್ಯಾಸಬಲ. "ಅಲ್ವೆ ತರಕಾರಿ ಏನು ತರಲಿ?"–ಎಂದು ಅವರು ಕೇಳಿದಾಗ, "ಹುರುಳಿಕಾಯೋ, ಏನೋ ತನ್ನಿ"–ಎನ್ನಬೇಕು, ಯಾರಾದರೂ. "ಎಷ್ಟು ತರಲಿ?"–ಎಂದಾಗ "ಒಂದು ವೀಸೇನೋ ಏನೋ ತನ್ನಿ"–ಎಂದು ಯಾರಾದರೂ ಅನ್ನಬೇಕು. ಅಂತೂ ಅವರ ಪ್ರಶ್ನೆಗೆ ಅವರ ಪತ್ನಿ, ಪುತ್ರಿ, ಪುತ್ರ ಕೊನೆಯಪಕ್ಷ ಚಿಕ್ಕಮಗು ಏನಾದ್ರೂ ಒಂದು ಉತ್ತರ ಹೇಳಿದರೆ ಅವರು ಮುಂದಿನ ಪ್ರಶ್ನೆಗೆ ಹೋಗೋದು.

ಶಾರಿಗೂ ಅದೇ ಸ್ವಭಾವ. "ಹಿರಿಯಪ್ಪನ ಚಾಳಿ ಮನೆಮಕ್ಕಳಿಗೆಲ್ಲಾ." ಆದ್ರೆ ಶಾರಿಗೆ ಅಷ್ಟಿಲ್ಲ. ಕೊಂಚ ಕಡಿಮೆ. ಎಲ್ಲಾದಕ್ಕೂ ಏನಾದ್ರೂ ಒಂದು ಪ್ರಶ್ನೆ ಕೇಳಬೇಕು, ಉತ್ತರ ಪಡೆಯಬೇಕು ಎಂಬ ಹುಚ್ಚು ಕುತೂಹಲ ಅವಳಿಗೆ. ಅದರಿಂದ ಅವಳಿಗೊಂದು ಅವರ್ಣನೀಯ ಸಮಾಧಾನವಾಗುತ್ತೆ. ಅದು ನನಗೆ ಗೊತ್ತು.

"ನಿಮಗೆ ಹೇಗೆ ಗೊತ್ತಾಯಿತು?"–ಅಂತ ಮಾತ್ರ ನನ್ನ ಕೇಳಬೇಡಿ. ಹಾಗೆ ಕೇಳಿದರೆ ಶಾರಿ ಹೇಳಿದ ಹಾಗೆ. "ಹೇಗೋ ಗೊತ್ತಾಯಿತು, ನಿಮಗೆ ಅದೆಲ್ಲಾ ಯಾಕೆ?"–ಎಂದು ನಾನೂ ಉತ್ತರಕೊಡಬೇಕಾಗುತ್ತೆ. ನೀವು ಅಷ್ಟಕ್ಕೆ ದಾರಿ ಮಾಡಿಕೊಳ್ಳಬೇಡಿ.

ಒಟ್ಟಿನಲ್ಲಿ ಶಾರಿಗೆ ಪ್ರಶ್ನೆ ಕೇಳಿ–ಉತ್ತರ ಪಡೆಯುವುದರಲ್ಲಿ ಎಲ್ಲಿಲ್ಲದ ಆಸಕ್ತಿ. "ನಿಮ್ಮ ತಂದೆ ಪ್ರಶ್ನೋಪಾಧ್ಯಾಯರು, ನೀನೊ....ಪ್ರಶ್ನಗುವರಿ.... ಅಲ್ಲಲ್ಲ....ಪ್ರಶ್ನಸುಂದರಿ....ಏಕೆಂದರೆ 'ಗುವರಿ' ಅವಸ್ಥೆಯನ್ನು ನೀನು ಹಿಂದೆ ಹಾಕಿದ್ದಿ"–ಎಂದರಂತೂ ಶಾರಿ ಮೂಗಿನ ತುದಿಗೆ ಬೆಳ್ಳುಳ್ಳಿ ತಿಕ್ಕಿದ ಹಾಗೆ ರೇಗುತ್ತಾಳೆ.

ಅದರಂತೆ ಅವಳು ಕೇಳಿದ ಪ್ರಶ್ನೆಗೆ ನಾನು "ಮನೆ ಬಂದೊಡನೆ ತಲೆ ಬಾಗಿಲು ನೋಡಿದೆ. ತಟ್ಟಿದೆ....ನೀನು ತೆಗೆದೆ"–ಎಂದು ಉತ್ತರಿಸಿದೆ.

"ಅದಲ್ಲರೀ ನಾನು ಕೇಳಿದ್ದು....ಬಾಗಿಲು ತೆಗೆದೊಡನೆ ಏನು ನೋಡಿದ್ರಿ ಅಂತ."

"ಓಹೊ...ಬಾಗಿಲು ತೆಗೆದೊಡನೆಯೋ...ಸರಿಸರಿ ನಿನ್ನೇ...ನೋಡಿದ್ದು... ನಿನ್ನ ತಿದ್ರೂಪ (ತಿದ್ದಿದ ರೂಪ) ತೆಳುನೋಟ, ತಿಳಿನೋಟ...."

"ತೇಲು ನೋಟ ಮೇಲು ನೋಟ....ಹೂಂ....ಹೊ ಡೀ ರಿ ನಿ ಮ್ಮ ಗಾಡಿ...."

"ಅವನ್ನಲ್ಲದೆ ಮತ್ತೇನನ್ನು ನೋಡಲು ಸಾಧ್ಯ! ಅದಕ್ಕೇನಾ ನಾನು ಇಷ್ಟೊಂದು ಕಷ್ಟಪಟ್ಕೊಂಡು ಅಲಂಕಾರ ಮಾಡಿಕೊಂಡಿರೋದು, ಹೊಸ ಸೀರೆ ಉಟ್ಕೊಂಡು, ಹೊಸ ಬ್ಲೌವುಜು ತೊಟ್ಕೊಂಡು ಹೊಸ ಗಂಟು (ತಲೆ ಗಂಟು) ಹಾಕ್ಕೊಂಡು....ಅಂತ ನಿನ್ನ 'ಪ್ರಶ್ನಾವಳಿ'ಯನ್ನೇ ಆರಂಭಿಸಿಬಿಡ್ತೀ."

"ಹೌದ್ರಿ....ನಾನು ಕೇಳೋದೆಲ್ಲ, ನಿಮ್ಮನ್ನು ಹಾವಳಿ ಮಾಡೋಕೆ ಅಲ್ವಾ ...ಈಗೇಕೆ ಮಾತು, ಇನ್ನು ಮೇಲೆ ನಿಮ್ಮನ್ನೇನಾದ್ರೂ ಕೇಳಿದ್ರೆ ಕೇಳಿ."

"ಯಾರ್ನ ಕೇಳ್ಲಿ....ನಿನ್ನೇ ಕೇಳ್ಲೋ....ಅಥವಾ"

"ಆ ಗೋಡೆ ಕೇಳಿ"–ಬುಟ್ಟಿಯಿಂದ ಹೊರತೆಗೆದ ನಾಗಿಣಿಯಂತೆ ಬುಸು ಗುಟ್ಟಿದಳು ಶಾರಿ. ಎಷ್ಟಾದರೂ ಹೆಂಗಸಲ್ಲವೆ, ಕೋಪಗೊಂಡರೂ ಲಕ್ಷಣವಾಗಿ ಕಾಣುತ್ತಾರೆ, ನಗುನಗುತ್ತಿದ್ದರೂ ಲಕ್ಷಣವಾಗಿರುತ್ತಾರೆ.

"ಹಾಗಂದ್ರೆ....ನಿನ್ನಾದ್ರೂ ಕೇಳಬಹುದು ಅಥವಾ ಗೋಡೇನಾದ್ರೂ ಕೇಳ ಬಹುದೂ ಅನ್ನು....ಯಾವ ಗೋಡೇನಾದ್ರೂ ಕೇಳಬಹುದೊ....ಎದುರಿಗಿರುವ

ಗೋಡೇನೆ ಕೇಳಿದ್ರೆ ಆಗುತ್ತ್ಯೋ"–ಎಂದು ನಾನಂದೆ. ಅವಳಿಗೆ ಮುಖ ಪರಚಿ ಕೊಂಡಂತೆ ಆಯಿತು.

"ಅಂತೂ ನಿಮ್ಮ ದೃಷ್ಟಿಯಲ್ಲಿ ನಾನೂ ಒಂದೇ ಗೋಡೇನೂ ಒಂದೇ."

"ಹೌ. .ದೇ....ಹೌ... ದು!"–ನಿಧಾನವಾಗಿ ಹೇಳಿದೆ. ಶಾರಿ ಸಿಡಿಮಿಡಿ ಗೊಂಡಳು.

"ಕೋಪಗೊಂಡಾಗ ನೀನು ಸಾಕ್ಷಾತ್ ಕಮಂಗೀನೆ ಕಣೇ"–ಎಂದೆ.

"ಟಿಣಾರ್" ಎಂದು ಅವಳ ತಾಳ್ಮೆಯ ತಂತಿ ಹರಿಯಿತು. ಉಷ್ಣದ ಅತಿರೇಕವೇ ಶೀತದ ನೀರಾಗಿ ಕಣ್ಣಿಂದ ಚಿಮ್ಮಿ ಕೆನ್ನೆಯ ಮೇಲೆ ನೆಗೆದು, ಹರಿದು, ಗದ್ದದಿಂದ ತೊಟ್ಟಿಕ್ಕುವಂತಾಯಿತು. ಕಣ್ಣು ಜಲಾಮುಖಿಯಾಯಿತು.

ಅವಳ ಸೀರೆಯ ಸೆರಗನ್ನೇ ಹಿಡಿದು ಕಣ್ಣಿನ ಬಳಿಗೆ ತಂದೆ. (ನಾನೇನು ಮಾಡಲಿ ಅವಳಿಗೆ ನನ್ನ 'ಕರ್‌ಛೀಫ್' ಕಂಡರಾಗದು. ಅದನ್ನು ಅವಳು ಹಿಡಿದರೆ ಚೊಚ್ಚಲು ಬಯಕೆಯವರಂತೆ ಆಡಿ ಬಚ್ಚಲುಮನೆಗೆ ವಾಂತಿ ಮಾಡಿ ಕೊಳ್ಳಲು ಓಡುತ್ತಾಳೆ.) ಸೆರಗಿನಿಂದ ಕಣ್ಣೀರು ಒರಸತೊಡಗುತ್ತ "ಇಂಥ ಸಣ್ಣ ವಿಚಾರಗಳಿಗೆ ಕೋಪಿಸಿಕೊಂಡರೆ ಹೇಗೆ?"–ಎಂದು ಸಮಾಧಾನಮಾಡಿದೆ. "ನಿನ್ನ 'ಗಗನಚುಕ್ಕಿ ಭರಚುಕ್ಕಿ' ನಿಲ್ಲಿಸೇ" ಎಂದೆ.

ಅವಳಿನ್ನೂ ಹೆಚ್ಚುಮಾಡಿ ಹೆಣ್ಣಿನ ಸ್ವಭಾವ ತೋರಿಸಿದಳು. ನನ್ನ ಮಾತಿಗೆ ಅಸಮ್ಮತಿಯನ್ನು ಸೂಚಿಸುವ ಸಲುವಾಗಿ 'ಸೊರ್' ಎಂದು ಮೂಗ ನ್ನೊಂದು ಬಾರಿ ಜೋರಾಗಿ ಸಿಂಡರಿಸಿದಳು.

ಅವಳ ಹತ್ತಿರ ಹೋದೆ. ಮೂಗು ಹಿಡಿದೆ. ಅಲ್ಲಾಡಿಸಿದೆ. ಅವಳು ಕೆಂಪಾದಳು. ಮಿಂಚಿದಳು, ಮಿಸುಕಾಡಿದಳು. ಅವಳ 'ಕೋಪದಹನ' ವಾಯಿತು.

"ನಿಮಗೆಲ್ಲೋ ಮಾಡೋಕೆ ಕೆಲಸ ಇಲ್ಲ ಅಂತ ಕಾಣುತ್ತೆ"–ಎಂದಳು.

"ಕೆಲಸ ಇದೆ....ನಿನ್ನ ಸಮಾಧಾನ ಮಾಡೋದು"–ಎಂದೆ. ಕಿಂಚಿತ್ ಮಂದಹಾಸ ತುಟಿಯಲ್ಲಿ ತುಳುಕಿ, ನಾನು ನೋಡುವುದಕ್ಕೆ ಮುಂಚೆಯೇ ಮಾಯವಾಯಿತು. ಆದರೂ, ಬೇಸಿಗೆಯಲ್ಲಿ ಬಹುದಿನ ಮಳೆಯಾಗದೆ ಇದ್ದು,

ಒಂದು ಹದ ಮಳೆಯಾದಾಗ ನೆಲದ ಮೇಲೆ ನೀರಿರದಿದ್ದರೂ, ನೆಲ ನೀರುಂಡ ಸ್ಥಿತಿಯನ್ನು ಕಳಕಳಿಯಿಂದ ತೋರಿಸುವಂತೆ, ಅವಳ ಮುಖದಲ್ಲಿ ನಸುನಗು ಬಂದು ಹೋದ ಚಿಹ್ನೆ ಕಾಣುತ್ತಿತ್ತು.

"ಅಲ್ವೇ ನಾನೇನ್ ಹೇಳ್ದೆ....ಅಳೋ ಅಂಥದು."

"ನನ್ನ ಪುನಃ ರೇಗಿಸಬೇಡಿ."

"ಕಮುಂಗಿ ಅಂದಿದ್ದಕ್ಕೆ ಅಷ್ಟೊಂದು ರೇಗಿದರೆ?"

"ನಾನು ಕಮುಂಗಿ ಅಲ್ವೆ ನಿಮ್ಮ ಕಣ್ಣಿಗೆ...."–'ಪುನರಾಯನ್ ಮಹಾ ಪೂರ'–ಎನ್ನುವ ಸ್ಥಿತಿಯಲ್ಲಿದ್ದುವು ಅವಳ ಕಣ್ಣುಗಳು. ನಾನು ಆಕೂಡಲೆ,

"ಅದರರ್ಥವೇನಾದ್ರೂ ನಿನಗೆ ಗೊತ್ತಿದ್ದಲ್ಲಿ ನೀನಷ್ಟು ರೇಗ್ತ್ರಲೇ ಇರ್ಲಿಲ್ಲ."

"ಅದಕ್ಕರ್ಥ ಬೇರೆ ಇದೆ....ಬೇಳಿಕಾಳು."

"ಹೌದೇ, ಕಮುಂಗಿ ಅನ್ನೋದು ಹಳಗನ್ನಡ; ಹೊಸಗನ್ನಡದಲ್ಲಿ ಅದಕ್ಕೆ ಕೋಮಲಾಂಗಿ ಅಂತಾರೆ."

"ಹೂಂ ...ಹೌಧೌದು...."

"ನಿಜವಾಗ್ಲೂ ಕಣೇ. ನೀನು 'ಎಲ್ಲಿಸ್' ಕಟ್ಟಿದ್ದಾಗ ತತ್ಸಮ–ತದ್ಭವಗಳ ಪಟ್ಟಿಯಲ್ಲಿ ಇದಿತ್ತು!"

"ಇಂಥಾ 'ಬರುಡೆ'ಗೆ ಸರಿ ನೀವು."

"ಇನ್ನೆಂಥಾದಕ್ಕೆ ಸರಿಯಲ್ಲ ನಾನು!....ನಿನ್ನ 'ಜಲಪಾತ' ನಿಂತಿತೆಲ್ಲಾ ಅಷ್ಟೇ ಸಾಕು....ನಾನಿನ್ನು ಹೋಗ್ತೇನೆ 'ಫ್ರೆಂಡ್ಸ್' ಕಾಯ್ತಾ ಇರ್ತಾರೆ."

"ಅಲ್ರಿ, ಬೆಳಗ್ಗೆ ಹನ್ನೊಂದು ಘಂಟೆಯಿಂದ, ಮನೇಲಿ ಕಾಯ್ತಾ ಇದೊ ನಮಗಿಂತ ಹೊರಗಡೆ ಕಾಯ್ತಾ ಇರೋರೆ ಹೆಚ್ಚಾದ್ರೆಲ್ಲಾ ನಿಮಗೆ....ಈ ಗಂಡಸ್ರೇ ಇಷ್ಟು...."

"ನೋಡು ಆಗ್ಲೇ ಇಷ್ಟು....ಮಾತಾಡಿಸಿದ್ರೆ ಮೇಲು ಬೀಳೋದು, ಇಲ್ಲವೆ, ಮಳೆಗರಿಯೋದು. ಈ ಹೆಂಗಸ್ರೇ ಇಷ್ಟು!"

ಮಳೆಗಾಲದ ಕಾರ್ಮುಗಿಲು ಆವರಿಸಿದಂತೆ ಮುಖ ಕಪ್ಪಿಟ್ಟಿತು. ತೂತು ತಪ್ಪಲೆಯಲ್ಲಿ ನೀರು ಸೋರುವಂತೆ ಕಣ್ಣೀರು....ವಿಷಯ ವಿಷಮಿಸಿತೆಂದು ನನಗರಿವಾಯಿತು. ನಾನೇ ಮುಂದುವರಿದು :

"ಏನೇ, ಬಾಗಿಲು ತೆಗೆದಕೂಡ್ಲೆ ಏನು ಕಣ್ಣಿಗೆ ಬಿತ್ತು ಅಂತಾನೆ ನೀನು ಹೇಳಿದ್ದು....ಏನಾದ್ರೂ ಬದಲಾವಣೆ ಮಾಡಿದ್ಯಾ...."

"ಏನು ಬದಲಾವಣೆ ಮಾಡಿದ್ದೀನಿ ಹೇಳಿ ನೋಡೋಣಾಂತನೇ ನಾನು ಕೇಳ್ತಾ ಇರೋದು; ನನ್ನ ಕೈಲೇ ಹೇಳಿಸೋಕೆ 'ಪ್ಲಾನ್' ಮಾಡ್ತಾ ಇದ್ದೀರೆಲ್ಲಾ....ಅದೆಲ್ಲಾ ನನಗೂ ಗೊತ್ತಾಗುತ್ತೆ!"

"ನೀನು ಮಾಡೋ ಬದಲಾವಣೆ ನನಗ್ಹೇಗೆ ಗೊತ್ತಾಗಬೇಕು. ದಿನಾ ಒಂದೊಂದು ಬದ್ಲಾವಣೆ ಮಾಡ್ತಾ ಇರ್ತಿ. ಇದನ್ನು ತೆಗೆದು ಅಲ್ಲಿಡೋದು, ಅದನ್ನ ತೆಗೆದು ಇಲ್ಲಿಡೋದು, ಇದನ್ನು ಹಾಕೋದು... "

"ಈಗ, ಅದನ್ನ ತೆಗೆದೇ ಇದನ್ನ ಹಾಕಿರೋದು....ಆ 'ಇದು' ಯಾವುದು ಅಂತ....ನಾನು ಹೇಳೊಲ್ಲ ನೀವೇ ಹೇಳ್ಬೇಕು."

"ನೀನು ಹೇಳ್ದೆ ಇದ್ರೆ ನಾನೇ ಹೇಳ್ತೇನೆ. ಆದ್ರೆ ಅದನ್ನ ನೀನು ಒಪ್ಕೊಳೊಲ್ಲ!"

"ಅದೇಕೆ ಒಪ್ಕೊಳೊಲ್ಲ.. ಸರಿಯಾಗಿ ಹೇಳಿದ್ರೆ ಯಾರು ತಾನೇ ಒಪ್ಕೊಳೊದಿಲ್ಲ. ಈಗ ಹೇಳಿ ಮತ್ತೆ....ಹೊಸಲು ದಾಟಿದ ಕೂಡ್ಲೆ ಏನು ಕಂಡ್ರಿ ಅಂತ."

"ನನಗೇನು ಕಾಣಿಸಿತು?"–ಎಂದು ನನ್ನನ್ನು ನಾನೇ ಪ್ರಶ್ನಿಸಿಕೊಂಡೆ. ನನಗೇ ಆಶ್ಚರ್ಯವಾಯಿತು. ಅಥವಾ ಆಶ್ಚರ್ಯವಾದವನಂತೆ ನಟಿಸಿದೆ–ವಿಧಿಯಿಲ್ಲ! ನನಗೇನೂ ಕಾಣಿಸಲಿಲ್ಲ. ರೂಮಿನಲ್ಲೆಲ್ಲಾ ಮತ್ತೊಂದು ಬಾರಿ ನೋಡಿದೆ. ಆದರೂ ನನಗೇನೂ ಗೋಚರವಾಗಲಿಲ್ಲ. ಕೊನೆಯ ಬಾರಿ ಕೋಣೆಯ ಸುತ್ತ ಮುತ್ತ ನೋಡಿದೆ, ಮತ್ತೆ ನೋಡಿದೆ, ಮತ್ತೆಮತ್ತೆ ನೋಡಿದೆ. ಸುತ್ತಮುತ್ತ ನೋಡಿ, ನೋಡುತ್ತಾ ಸುತ್ತಿದೆ, ಮುತ್ತಿದೆ. ಕುಳಿತ ಕುರ್ಚಿಯ ಹಿಡಿಯನ್ನಲ್ಲಾಡಿಸಿದೆ. ಮೇಜನ್ನು ಎಳೆದಾಡಿದೆ. ತಲೆ ಕೆರೆದುಕೊಂಡೆ. ಕೊನೆಗೂ ಗೊತ್ತಾಗಲಿಲ್ಲ. ಸುಸ್ತಾದೆ. ಶಾರಿ ನಗುತ್ತಿದ್ದಳು. ಬೇರೆ ಗತ್ಯಂತರವಿಲ್ಲದೆ "ರಾತ್ರಿ ಹೇಳುತ್ತೇನೆ" ಅಂದೆ. ಆದಕ್ಕವಳು ಒಪ್ಪಲಿಲ್ಲ. ಮುಖ ಚಿಕ್ಕದಾಯಿತು.

ನಾನು ಚಿಂತಾಕ್ರಾಂತನಾಗಿ ನೆಲ ನೋಡಿದೆ. ವಡೆ ಚೂರು ಚಟ್ನಿ ಚಿಹ್ನೆ. ಮೈಸೂರು ಪಾಕ್ ಪುಡಿ....ಥಟ್ಟನೆ ಹೊಳೆಯಿತು. ಆರ್ಕಿಮಿಡೀಸನಂತೆ....

ಹೊಸಲುದಾಟಿದ ಕೂಡಲೆ ನನ್ನ ಕಣ್ಣಿಗೆ ಬಿದ್ದಿದ್ದು ವಡೆಚೂರು, ಮೈಸೂರು ಪಾಕ್ ಪುಡಿ...."ಅದನ್ನೇ ತಾನೇ ನೀನು ಮಾಡಿರೋದು....ಹೌದೊ.... ಇಲ್ಲೊ" ಎಂದು ಕುತೂಹಲದಿಂದ ನೋಡುತ್ತ ಹೇಳಿದೆ.

–'ಉಹೂಂ' ಎನ್ನುವರ್ಥದಲ್ಲಿ ಶಾರಿ ತಲೆಯಾಡಿಸಿದಳು, ಮೌನದಿಂದ.

"ಹಾಗಾದ್ರೆ ಈ ವಡೆ ಚೂರು....ಮೈಸೂರುಪಾಕ್ ಪುಡಿ ಚಟ್ನಿ....ಎಲ್ಲಿಂದ ಬಂತು!"–ಎಂದು ಪ್ರಶ್ನಿಸಿದೆ.

"ಪಕ್ಕದ ಮನೆ ಕಾಮಾಕ್ಷಮ್ಮ ಬಂದಿದ್ದರು. ಅವರ ಹುಡುಗ ಒಂದೇ ಸಮನೆ ರಂಪಾಟ ಮಾಡಿದ 'ತಿಂಡೀ ತಿಂಡೀ' ಅಂತ, ಹೋಟಲಿನಿಂದ ಒಂದು ವಡೇನು, ಮೈಸೂರುಪಾಕನ್ನೂ ತರಿಸಿಕೊಟ್ಟೆ. ಅದನ್ನು ಇಲ್ಲೇ ಕುಳಿತು ಚೆಲ್ಲಾಡ್ತಾ ತಿಂದ. ಅವರು ಈಗತಾನೇ ಹೋದ್ರು....ಕಸ ಜಾಡಿಸಬೇಕು ಅನ್ನೋವಷ್ಟರಲ್ಲಿ ನೀವು ಬಾಗಿಲು ದಾಟಿದ್ರಿ."

ನಾನು ಸೋಲನ್ನೊಪ್ಪಿಕೊಳ್ಳಲೇಬೇಕಾಯಿತು. ಒಪ್ಪಿಕೊಂಡೆ. ಗಡಿಯಾರ ನೋಡುತ್ತ "ಆಗಲಿ, ಈಗ ಹೊತ್ತಾಯಿತು, ರಾತ್ರಿ ಹೇಳುತ್ತೇನೆ"–ಎಂದು ತಪ್ಪಿಸಿಕೊಂಡು ಪರಾರಿಯಾದೆ.

* * * *

ರಾತ್ರಿ ಪೇಟೆಯಿಂದ ಬರುತ್ತಲೇ ವಡೆ, ಮೈಸೂರುಪಾಕ್, ಕೇಸರಿ ಹಾಲು ಇತ್ಯಾದಿ ನನಗಾಗಿ ಕಾದಿದ್ದುವು. ಹೊಟ್ಟೆ ಬಿರಿಯುವವರೆಗೂ ತಿಂದೆ. ತಿನ್ನುವುದರಲ್ಲಿ ನನ್ನದು ಕೊಂಚ ಮಿತಿಯಿಲ್ಲದ್ದು ಎಂದು ಹೇಳಬಹುದು. ಹೊಟ್ಟೆ ಭಾರವಾದ ಮೇಲೆ ಆರಾಮ ಕುರ್ಚಿಗೆ ಒರಗಿ ಶರೀರವನ್ನು ಸಡಿಲಮಾಡಿಕೊಂಡು ಕುರ್ಚಿಯ ಕೈಗಳ ಮೇಲೆ ನನ್ನ ಕೈಗಳನ್ನು ಲೀಲಾಜಾಲವಾಗಿ ಹರಿಯಬಿಟ್ಟು, ಕಾಲುಗಳನ್ನು 'ವಿ' ಆಕಾರವಾಗಿ ಅಗಲಿಸಿಕೊಂಡು ತಿನಿಸುಗಳ ರುಚಿಯ ಪುನರಾಮರ್ಶೆಯನ್ನು ಮನೋಮಂಡಲದಲ್ಲಿ ಕಲ್ಪಿಸಿಕೊಂಡು ಆ ಜಿಹ್ವಾಸುಖವನ್ನು ಮರುಕಳಿಸಿಕೊಳ್ಳುತ್ತ ಕಣ್ಣು ಮುಚ್ಚಿಕೊಂಡಿದ್ದೆ.

"ನಾನು ಕೇಳಿದ್ದಕ್ಕೆ....ಹೇಳಿದ್ರಾ"–ಎಂದು ಶಾರಿ ಕೂಗಿದಾಗ ನನಗೆ ಪ್ರಜ್ಞೆಯ ಪುನರಾಗಮನವಾಯಿತು.

ನನಗೆ ಪೀಕಲಾಟಕ್ಕಿಟ್ಟುಕೊಂಡಿತು. ಸಂದರ್ಭಕ್ಕನುಸಾರವಾಗಿ ಸುಳ್ಳು ಹೇಳಲೇಬೇಕಾಯಿತು. ಇಷ್ಟೆಲ್ಲಾ ತಿನಿಸು ತಯಾರಿಸಿ, ತಿನ್ನಿಸಿ ನೀರು ಕುಡಿಸಿದವಳಿಗೆ ಒಂದಿಷ್ಟು ಸುಳ್ಳನ್ನಾದರೂ ಹೇಳದಿದ್ದರೆ....

ಮುಖದ ಮೇಲೆ ಆಸೆಯ ಬೆಳಕನ್ನು ಮುಸುಕಿಸಿಕೊಂಡು ಮುಖ ಅಗಲ ಮಾಡಿಕೊಂಡು ಬಿಡುಗಡೆಯ ಉಸಿರು ಬಿಡುತ್ತ:

"ಅಲ್ವೇ, ನಿನ್ನ 'ಕರಾಟ' ನನಗೆ ಗೊತ್ತಾಗೊಲ್ವೇ ನಿನ್ನ ಅದು (!).... ನಾನೇನು ಗಮನಿಸಲಿಲ್ಲಾ ಅಂತ ತಿಳ್ಕೋಬೇಡ. ನಾನು ಮನೆಯೊಳಗೆ ಕಾಲಿಟ್ಟ ತಕ್ಷಣ 'ಅದ'ನ್ನೇ ನೋಡಿದೆ. ನಾನು 'ಅದ'ನ್ನು ಯಾಕೆ ಹೇಳೋಣ, ನೀನು ಅದನ್ನು ಕೇಳಿದ್ರೆ ಹೇಳೋಣ ಅಂತ ಹೇಳ್ಲಿಲ್ಲ."

ಶಾರಿಗೆ ಬಹಳ ಸಂತೋಷವಾಯಿತು. ಹಾಗೆ ನನಗೆ, ಅವಳ ಮುಖದಲ್ಲಿ ಕಂಡುಬಂದಿತು. ಮೂರ್ಛೆಯಿಂದ ಎಚ್ಚರಗೊಂಡವಳಂತೆ ಅವಳು ದೀರ್ಘವಾಗಿ ಉಸಿರಾಡಿದಳು. ಮೂಗಿನ 'ಬೇಸರಿ' ಫಳಫಳಿಸಿತು.

"ಹಾಗಾದ್ರೆ....ಅದು ಏನು?"–ಎಂದು ಕೇಳಿದಳು.

ಈ ಪ್ರಶ್ನೆಗೆ ಉತ್ತರಿಸಿದರೆ ಶಾರಿಗೆ ಅಷ್ಟೇ ಸಾಕು. ಅವಳಿಗೆ ಎಲ್ಲಿಲ್ಲದ ತೃಪ್ತಿ, ಸಂತೋಷ. ಈ ಉತ್ತರಕ್ಕಾಗಿ ಅವಳ ಕುತೂಹಲ ತಡೆಯಲಾರದೆ, ಅವಳೆದೆ ಹಿಂದಕ್ಕೂ ಮುಂದಕ್ಕೂ 'ಜೀಕಿ'ಯಾಡುತ್ತಿತ್ತು!

ಅವಳ ಪ್ರಶ್ನೆ....ಅದಕ್ಕೆ ಉತ್ತರ... ಅಷ್ಟೆ!–ನಮ್ಮಿಬ್ಬರ ನಡುವೆ ಆಗ ಆಗುತ್ತಿದ್ದ 'ಸರಸ'ವನ್ನು ಹಾಗೇ ಉಳಿಸಿಕೊಂಡಿರಬಲ್ಲದಾಗಿತ್ತು.

ಆದರೆ, ವಿಧಿಯ ಆಟವೇ ಬೇರೆಯಾಗಿತ್ತು. ಬೊಮ್ಮನ ಬರವಣಿಗೆಯೇ ಬೇರೆಯಾಗಿತ್ತು. ಅವನು ನಮ್ಮಂತೆ ಫೌಂಟನ್‌ಪೆನ್ ಅಥವಾ ಪೇನಾಗಳಲ್ಲಿ ಕಾಗದದ ಮೇಲೆ ಬರೆದರೆ ತಾನೇ ಅವನಿಗೂ ಗೊತ್ತಾಗೋದು, ತಾನು ಹಿಂದೆ ಏನು ಬರೆದಿದ್ದೆ, ಮುಂದೇನು ಬರಿಯಬೇಕು ಅಂತ; ಆಫೀಸ್ ಕಾಪಿ ಇಟ್ಕೊಳಲ್ಲ ಅಂತ ಕಾಣುತ್ತೆ. ಅವನು ಬರಿಯೋದು ನಮಗೆ ಗೊತ್ತಾಗದೇ ಇದ್ದರೆ ಹೋಗಲಿ, ಅವನಿಗೆ ಗೊತ್ತಾಗುತ್ತದೆ ಅಂದರೆ ಅದೂ ಇಲ್ಲ. ಅನೇಕ ವೇಳೆ ಬರೆದಿದ್ದನ್ನೇ ಬರೀತಾನೆ....ಬರೀಬಾರದನ್ನೇ ಬರೀತಾನೆ....ನನ್ನ ವಿಷಯದಲ್ಲೂ ಅದೇ!

"ಅದು....'ಅದೇ' ಕಣೇ."

"ಅದೇ....ಏನು ಅಂತ ಕೇಳ್ತಾ ಇರೋದು."

"ಅದೇಕಣೇ."

"ಅದೇ ಇದು, ಇದೇ ಅದು ಅಂತ ನನ್ನ ಸತಾಯಿಸಬೇಡಿ. ಅದಕ್ಕೆಲ್ಲಾ ಒಪ್ಕೊಳ್ಳೊಲ್ಲ, ನೀವು ನಿಮ್ಮ 'ಅದು-ಇದು' ಬಿಟ್ಟು ಸರಿಯಾಗಿ ಹೇಳಬೇಕು."

ನಾನು ವಿಧಿಯಿಲ್ಲದೆ (ಇದನ್ನು ಮೊದಲೇ ಹೇಳಿದ್ದೇನೆ) ಪುನಃ ಸುಳ್ಳಿಗೇ ಶರಣು ಹೋಗಬೇಕಾಯಿತು. ಹೆಂಗಸರಿಗೆ ಪ್ರಧಾನವಾಗಿರುವುದು ಯಾವುದು? -ಎಂದು ಎರಡು ಕ್ಷಣ ಯೋಚಿಸಿದೆ. 'ಸ್ತ್ರೀಗೆ ಸೀರೆಯೇ ಭೂಷಣಂ'-ಎಂದು ಹೇಗೊ ಹೊಳೆಯಿತು. ಸರಿ ಅದರ ಮೇಲೇ ಭಾಷಣ ಎಂದು ನಿರ್ಧರಿಸಿದೆ.

"ನೀನಿವತ್ತು ಹೊಸ ಸೀರೆ ಉಟ್ಕೊಂಡಿದ್ದಿ, ಅದೇ"-ಎಂದು ಲೊಟಿಕೆ ಹಾಕಿ ತೆಳುವಾಗಿ ಹುಬ್ಬು ಎಗರಿಸಿ ನಸುನಕ್ಕೆ.

ಶಾರಿಯ ಮುಖ ನಿರುತ್ಸಾಹದ ದ್ರಾವಕದಲ್ಲಿ ಜಾಲಾಡಿದಂತಾಯಿತು. ಟೊಮಾಟೊ ಹಣ್ಣಿನಂತೆ ಕೆಂಪಗೆ ಮಿಂಚುತ್ತಿದ್ದ ಮುಖ ಇದ್ದಕ್ಕಿದ್ದಂತೆ ನವಿಲು ಕೋಸಿನಂತೆ ಬಿಳುಪಾಗಿ ಸುಕ್ಕುಸುಕ್ಕಾಯಿತು. ಅವಳ ಉತ್ಸಾಹದ ಮಂಜು ಗಡ್ಡೆಗೆ ಬಿಸಿ ತಗುಲಿತು.

"ಏನು! ಹೊಸ ಸೀರೆ ಉಟ್ಕೊಂಡಿದ್ದೇನೆಯೆ?....ಈಗ ಸರಿಹೋಯ್ತು! ಮದುವೆಯಾದ ಹೊಸದರಲ್ಲಿ ನಾನೂ ನೀವೂ ಹೋಗಿ, ಅದಾರೊ ನಿಮ್ಮ ಸ್ನೇಹಿತ ಜವಳಿ ಅಂಗಡಿ ಇಟ್ಟಿದ್ದಾನೆ ಅಂತ ಹೇಳಿ, ಅವನಂಗಡೀಲೇ ತರಲಿಲ್ವೆ. ಬಣ್ಣಾ ಹೋದ್ರೆ ವಾಪಸು ತಗೋತೀನಿ ಅಂತ ತಲೆಗೆ ಕಟ್ಟಿದನಲ್ಲಾ!"

"ಹೌದೇನು?....ಹೌದು ಕಣೆ!....ನನಗೆ ಎಲ್ಲೋ ಜ್ಞಾನ. ಅಂತೂ ಈ ಸೀರೆ ಒಳ್ಳೆ ಹೊಸದು ಕಂಡಹಾಗೆ ಕಾಣ್ತಾ ಇದೆ....ಈ ಸೀರೆ ನಿನಗೆ ತುಂಬಾ ಚೆನ್ನಾಗಿ ಕಾಣಿಸ್ತದೆ ಕಣೆ....ಈ ಸೀರೇಲಿ ನೀನು ತುಂಬಾ ಚೆನ್ನಾಗಿ ಕಾಣಿಸ್ತಾ ಇದ್ದಿ....ನೀನು ಯಾವಾಗ್ಲೂ ಈ ಸೀರೇನ ಉಟ್ಕೊಂಡಿರಬಾರ್ದಾ! ಈ ಸೀರೇನ ಈಚೆಗೆ ಉಟ್ಕೊಂಡಿಲ್ಲ ಅಂತ ಕಾಣಿಸ್ತದೆ"-ಎಂದಾರಂಭಿಸಿದೆ.

ಶಾರಿ ಇದ್ದಿದ್ದೂ ವ್ಯಸನಾಕ್ರಾಂತಳಾಗಿ:

"ಅಯ್ಯೊ, ನೀವು ಸರಿ. ನಿನ್ನೆ ಅಲ್ಲ ಮೊನ್ನೆ ಅದನ್ನೇ ಉಟ್ಕೊಂಡಿದ್ದೆ. ಈಗ್ಗೆ ನಾಲ್ಕು ದಿನದ ಹಿಂದೆ ಅದನ್ನೇ ಉಟ್ಕೊಂಡಿದ್ದೆ....ದಿನಬಿಟ್ಟುದಿನ ಅದನ್ನೇ ಉಟ್ಕೋತಾ ಇದ್ದೇನೆ. ನನಗಂತೂ ಈ ಸೀರೆ ಉಟ್ಕೊ ಉಟ್ಕೊ ಬೇಜಾರಾಗಿದೆ."

"ಹಾಗಾದ್ರೆ ಈ ಸೀರೆ ತುಂಬಾ ಬಾಳ್ಕೆ ಬಂತು ಅಂತ ಕಾಣುತ್ತೆ. ಈ ತರಹ ಸೀರೆಗಳೇ ಈಗ ಬರ್ತ್ನೋಲ್ಲ"–ಎನ್ನುತ್ತ ಅವಳ ಸೆರಗಿನ ತುದಿಯನ್ನು ಎತ್ತಿ ಹಿಡಿದು ಅದನ್ನು ಸವರಿದೆ.

"ನನಗೆ ಈ ಸೀರೆ ಕಂಡ್ರೇ ಆಗೊಲ್ಲ. ಮೊದಲ್ನೆಸಲ ನೀರಿಗೆ ಹಾಕ್ತಾನೇ ಬಣ್ಣಾಹೋಯ್ತು. ವಾಪಸು ಕೊಟ್ಟುಬನ್ರಿ ಅಂತ ನಿಮ್ಗೆ ಹೇಳಿದ್ದಕ್ಕೆ ನೀವು 'ಆತ ನನ್ನ ಫ್ರೆಂಡ್ ಕಣೇ, ಏನಾದ್ರೂ ತಿಳ್ಕೊತಾನೆ, ಅದು ಚೆನ್ನಾಗಿರೊಲ್ಲ.... ಲೊಟ್ಟೆ ಲೊಸಗ' ಎಂದು ಹೇಳಿ ಸುಮ್ಮನಿರಿಸಿದ್ರಿ....ಈ ಸೀರೇನೊ ಎಷ್ಟು ಉಟ್ರೂ ಹರೀಲೊಲ್ಲದು."

ನಾನೂ ಮಾತಿನ ಧಾಟಿಯನ್ನು ಬದಲಾಯಿಸಬೇಕಾಯಿತು. ಅದರ ಬಣ್ಣಹಾಕಿದವನನ್ನು ಬಯ್ಯುತ್ತಾ, ಅದನ್ನು ನೇದವನಿಗೆ ಗ್ರಹಚಾರ ಬಿಡಿಸುತ್ತಾ, ಅವಳ ಪ್ರಶ್ನೆಯನ್ನು ಮರೆಸಿಬಿಡುವುದಕ್ಕೆ ಸನ್ನದ್ಧನಾದೆ. ಆದರೆ ಮರುಗಳಿಗೆ ಯಲ್ಲೇ ನಿರಾಶನಾದೆ.

ನಿಮಗಿನ್ನೂ ಗೊತ್ತಾಗಿಲ್ವೆ....ಅವಳ ಪ್ರಶ್ನೆ ಪುನರಾಯನ್ ಮಹಾ.... ಯಂತೆ ಬಂತು ! ಅವಳ ಧ್ವನಿಯಲ್ಲಿ ಮೊದಲಿನ ಉತ್ಸಾಹವಿರಲಿಲ್ಲ. ವ್ಯಥೆಯ ಸೋಂಕಿತ್ತು. ನನ್ನ ಪ್ರಶ್ನೆಗೆ ಉತ್ತರ ಸಿಗಲಿಲ್ಲವಲ್ಲಾ ಎಂದು ಹೆಂಗರಳು ಕುಲುಕಾಡಿತು. ಏನಾದರೂ ಆಗಲಿ, ಅವಳನ್ನು ಸಮಾಧಾನ ಮಾಡಬೇಕೆಂದು ಹಟತೊಟ್ಟೆ. ಆದರೆ ನಾನು ಹಟ ತೊಟ್ಟೇನು ಪ್ರಯೋಜನ ? ನನ್ನ ಹಟ ಎಂದಿಗೂ ಗೆದ್ದಿಲ್ಲ, ಇದುವರೆಗೂ. ಆದರೂ ಪ್ರಯತ್ನಪಟ್ಟೆ. ಅವಳನ್ನೊಂದು ಬಾರಿ ಸೂಕ್ಷ್ಮವಾಗಿ ದಿಟ್ಟಿಸಿ ನೋಡಿದೆ., ಅವಳ ಕುತ್ತಿಗೆ ಕಂಡಿತು. ಅದರಲ್ಲಿದ್ದ ಹಾರದ ಮೇಲೆ ಕಣ್ಣು ಹೋಯಿತು. ಮತ್ತೊಂದು ಸುಳ್ಳು ಹೇಳಿ ಪ್ರಯತ್ನಿಸ ಬೇಕೆಂದು ಉತ್ಸಾಹ ಬರಲಿಲ್ಲ.

"ನಾನು ಸೋತೆ!"–ಎಂದು ಒಪ್ಪಿಕೊಂಡು ಆಕಳಿಸಿ ನಿದ್ದೆ ಬಂತೆಂದು

ಮಾರನೆಯ ದಿನ ನಾನು ಎದ್ದಾಗ ಶಾರಿ ಅಡಿಗೆಮನೆಯಲ್ಲಿದ್ದಳು. ನಾನು ಹಾಸಿಗೆಯ ಮೇಲೆ ಹೊರಳಾಡುತ್ತ ಕೋಣೆಯಲ್ಲಿ ಏನು ಬದಲಾವಣೆಯಾಗಿದೆ ಎಂದುಕೊಂಡೆ. ಏನೋ ಬದಲಾವಣೆಯಾಗಿದೆ. ಆದ್ರೆ ಬದಲಾವಣೆ ಎಲ್ಲಿ ಆಗಿದೆ, ಎಷ್ಟು ಆಗಿದೆ, ಏಕೆ ಆಗಿದೆ ಅನ್ನೋದು ಇನ್ನೂ ಹೊಳೀಲಿಲ್ಲ ನನ್ನ ತಲೆಗೆ. ಶಾರಿಯನ್ನು ಕರೆದೆ. "ಹೋಗ್ಲಿ, ಇದೊಂದು ಸಾರಿ ನೀನೇ ಹೇಳ್ಬಿಡೆ, ಏನು ಬದಲಾವಣೆ ಆಗಿದೆ ಅಂತ....ಇನ್ನು ಮುಂದೆ ನಾನು ಹೇಳ್ತೀನೆ. ಖಂಡಿತವಾಗಿಯೂ."

ಶಾರಿ ಜುಗುಪ್ಸೆಯಿಂದ : "ಈ ಸಾರಿ ನಾನು ಹೇಳೊಲ್ಲ... ಅದೆಷ್ಟು ದಿನಕ್ಕೆ ಹೇಳ್ತಿರೊ ಹೇಳಿ" ಎಂದಳು.

* * * *

ಕೆಲವು ದಿನಗಳವರೆಗೆ ನಾನು ನಿಜವಾಗಿಯೂ ಪ್ರಯತ್ನಪಟ್ಟೆ, ಹಾಳಾದ್ದು ಹೊಳೆಯಲಿಲ್ಲ. ಕಛೇರಿಗೆ ಹೋಗುವಾಗ, ಬರುವಾಗ ರೂಮಿನಲ್ಲಿನ ಎಲ್ಲಾ ವಸ್ತುಗಳನ್ನೂ ಒಂದೊಂದಾಗಿ ನೋಡುತ್ತಿದ್ದೆ. ಏನೇನೂ ಬದಲಾವಣೆಯಾಗಿಲ್ಲದಂತೇ ಕಂಡಿತು. ಎಲ್ಲವು ಇದ್ದಕ್ಕಿದ್ದಂತೆ ಕಂಡಿತು. ಹೀಗೆ ಒಂದು ವಾರ ಕಳೆದ ಮೇಲೆ ನಾನು ನೋಡುವುದನ್ನು ಬಿಟ್ಟುಬಿಟ್ಟೆ. ಆ ವಿಚಾರವನ್ನು ಮರೆತುಬಿಟ್ಟೆ.

* * * *

ಮತ್ತೆ ಕೆಲವು ದಿನಗಳನಂತರ ನಾನು ನನ್ನ ಕಛೇರಿಯ ಗೆಳೆಯನೊಬ್ಬನ ಮನೆಗೆ ಹೋಗಿದ್ದೆ. ಆತ ಊಟಕ್ಕೆ ಕರೆದಿದ್ದ. ಆಗ ಅವನು ಕೇಳಿದ :

"ಅಲ್ಲಯ್ಯ, ನನ್ನ 'ಮಿಸೆಸ್ಸು' ಹೇಳ್ತಾ ಇದ್ಲು....ನಿಮ್ಮ ಮನೆಗೆ ಬಂದಿದ್ದಾಗ ನಿನ್ನ ಹೆಂಡತಿ ಒಂದು ಟೇಬಲ್‌ಕ್ಲಾತ್ ತೋರಿಸಿದಳಂತೆ. ಲಾಂಗ್‌ಕ್ಲಾತ್ ಮತ್ತು ಉಲ್ಲನ್‌ದಾರ, ಸಿಲ್ಕ್‌ಪೀಸ್ ಸೇರಿಸಿಕೊಂಡು ಹಾಕಿದಾಳಂತೆ.... ಬಹಳ ಚೆನ್ನಾಗಿದೆಯಂತೆ. ಆ ಡಿಸೈನ್ ಸ್ವಲ್ಪ ಕೊಡಸಪ್ಪಾ ನನ್ನ ಮಿಸೆಸ್ ಹಾಕಬೇಕಂತಿದ್ದಾಳೆ.

"ಆವತ್ತಿನಿಂದ ನಿನ್ನ ಕೇಳಬೇಕಂತಾ ಇದ್ದೆ. ಆಫೀಸಿನಲ್ಲಿ ಅದು ನನಗೆ ಮರ್ತೇಹೋಗ್ತಾ ಇತ್ತು. ಇವತ್ತೂ ಮರ್ತೇ ಇದ್ದೆ. 'ಅವಳು' ಒಳಗೆ ಜ್ಞಾಪಿಸಿದಳು...." ಎಂದ.

'ಟೇಬಲ್‌ಕ್ಲಾತೇ'–ಎಂದುಕೊಂಡೆ ನಾನು. ಮುಂದೆ ನನ್ನ ಸ್ನೇಹಿತ ಏನೆಂದನೋ ಒಂದೂ ನನ್ನ 'ನಿಗಾ'ಕ್ಕೆ ಬರಲಿಲ್ಲ. ಮುಖ್ಯ ನನಗೆ ಶಾರಿಯ ಪ್ರಶ್ನೆಗೆ ಉತ್ತರ ಸಿಕ್ಕಿತು. ಅವಳು ಬದಲಾವಣೆ ಮಾಡಿರುವುದೇನು ಅನ್ನೋದು ಗೊತ್ತಾಯಿತು ! ಬೇಗ ಮನೆಗೆ ಹೊರಟೆ. ಮನಸ್ಸು ತುಂಬಾ ಮುದಗೊಂಡಿತ್ತು. ಕಳೆದುಕೊಂಡಿದ್ದ 'ನಿಧಿನಿಕ್ಷೇಪ' ಸಿಕ್ಕಿದಷ್ಟು ಸಂತೋಷವಾಯಿತು.

ಶಾರಿ ಬಾಗಿಲನ್ನು ತೆಗೆದಾಗ ಅವಳ ಕಣ್ಣುಗಳಲ್ಲಿ ಏನೋ ಒಂದು ರೀತಿಯ ನಿರೀಕ್ಷಣೆಯಿತ್ತು. ಅಥವಾ ನನಗೆ ಹಾಗೆ ಕಂಡಿತೊ ಏನೊ.... ನಾನಂತೂ ನಿಧಾನಮಾಡದೆ ರೂಮಿನ ಒಳಕ್ಕೆ ಹೋಗಿ ಟೇಬಲ್ಲಿನ ಮುಂದೆ ಕುರ್ಚಿಯ ಮೇಲೆ ಹಿಂದುಮುಂದಾಗಿ ಕುಳಿತೆ. ನಸುನಕ್ಕೆ. ಟೇಬಲ್ ಮೇಲೆ ಹಾಕಿದ್ದ 'ಕ್ಲಾತ್'ಅನ್ನು ಕೈಗಳಲ್ಲಿ ಹಿಡಿದುಕೊಂಡು 'ಶಾರೀ'–ಎಂದು ಅವಳನ್ನು ಹತ್ತಿರಕ್ಕೆ ಕರೆದೆ.

'ಏನು ?'–ಎಂದು ತನ್ನ ಸಹಜವಯ್ಯಾರದಿಂದ ಅವಳು ಬಳುಕುತ್ತಾ ಬಂದಳು. ಎಂದಿಗಿಂತಲೂ ಅಂದು ಬಹು ಚೆನ್ನಾಗಿ ಕಂಡಳು. ಬಹುಶಃ ನನ್ನ ಕಣ್ಣಿಗೆ ಹಾಗೆ ಕಂಡಳೊ !

"ನಿನ್ನ ಬದಲಾವಣೆ ಗೊತ್ತಾಯಿತು. ಅದು 'ಟೇಬಲ್‌ಕ್ಲಾತ್'.... ಹೊಸದಾಗಿ ಹಾಕಿದ್ದಿ. ಅದು ಟೇಬಲ್ಲಿಗೆ ಒಂದು ಠೀವಿಯನ್ನು ಕೊಟ್ಟಿದೆ. ಕಣ್ಣಿಗೆ ಒಂದು ಒಂದು ಕಂಪು, ಮನಸ್ಸಿಗೆ ಒಂದು ಮಂಪು ಅಲ್ಲಲ್ಲ....ಪೆಂಪು...." ನಾನು ಪೆಂಪು ಅನ್ನಬೇಕಂತಲೇ ಹೋಗಿ ಅಂತ್ಯಪ್ರಾಸಾಧೀನನಾಗಿ ವಿಧಿಯಿಲ್ಲದೆ 'ಮಂಪು' ಅಂದುಬಿಟ್ಟೆ.

ಶಾರಿ ಇದರಿಂದ 'ಕುಷಿ'ಯಾಗುವಳೆಂದು ನಾನು ಕಾತರದಿಂದ ನಿರೀಕ್ಷಿಸಿದೆ. ಆದರೆ ನನ್ನ ನಿರೀಕ್ಷೆ ತಪ್ಪಾಯಿತು.

"ಏಕೆ 'ಮೌನಂ ಗರ್ವತ್ರಸಾಧನಂ' ಎಂದು 'ಗುಡುಂ'ನೆ ಕೂತಿದ್ದಿ.... ಕೊನೆಗೂ ಹೇಳೇಬಿಟ್ರೆಲ್ಲಾ ಅಂತಾನ?"–ಎಂದು ಕೇಳಿದೆ.

"ಉಹುಂ....ಕೊನೆಗೂ ಹೇಳಲಿಲ್ಲವೆಲ್ಲಾ ಅಂತ. ಈಗ ಒಂದು ತಿಂಗಳ ಹಿಂದಿನಿಂದ ದಿನಬೆಳಗಾದರೆ ಅದರ ಮುಂದೆ ಕುಳಿತು ನೋಡ್ತಿದ್ರಿ....ಆದ್ರೂ ನಿಮಗೆ ಗೊತ್ತಾಗಲಿಲ್ಲ...."

"ಈಗ ಗೊತ್ತಾಯಿತೆಲ್ಲಾ....ಹೋಗಲಿ ಬಿಡು...."

"ಈಗ್ಲೂ ಇಲ್ಲ....ಈಗ ಹಾಕಿರೋದು ನಿಮ್ಮ 'ಚೌಕಳಿ' ಟವೆಲ್.... ನಿನ್ನೆಗೆ ಒಂದು ತಿಂಗಳು ತುಂಬಿತು, ಆ ಟೇಬಲ್‌ಕ್ಲಾತ್ ಹಾಕಿ. ಆದ್ರೂ ನೀವು ಹೇಳ್ಲಿಲ್ಲ, ಒಳಕ್ಕೆ ತೆಗೆದಿಟ್ಟೆ. ಬದಲು ನಿಮ್ಮ 'ಚೌಕಳೀ' ಟವೆಲ್ ಹಾಸಿದೆ. ಅದನ್ನು ನೀವು....ಹೊಗಳ್ತಾ...."

ನಾನು ನಿರಾಶನಾದೆ. "ಇನ್ನು ಮೇಲೆ ನೋಡೆ. ಏನು ಬದಲಾವಣೆ ಯಾದ್ರೂ ತಟ್ಟನೆ ಹೇಳದಿದ್ರೆ ಕೇಳು...."

"ಹಾಗೊ ?"

"ಹಾಗೇ...."

"ಸಾಕು ಸುಮ್ನಿರಿ ಯಾಕೆ ಜಂಬಾ ಹೊಡೀತೀರಿ....ಪಕ್ಕದ ಮನೆ ಕಾಮಾಕ್ಷಮ್ಮ ಈ ಸೀರೆ ತರಿಸಿದ್ದರಂತೆ. ಈ ಕಲರು ತುಂಬಾ ಚೆನ್ನಾಗಿದೆ. ನನಗೆ ಈ ಬಣ್ಣ ಅಂದ್ರೆ ಬಹಳ ಆಸೆ ಅಂದೆ. ಅದಕ್ಕೆ ಅವರು ಇದನ್ನು ನೀನೇ ಮೊದಲು ಉಟ್ಕೊಂಡು ನೀರಿಗೆ ಹಾಕಿ ಕೊಡು....ಹೇಗಿದ್ರೂ ನೀನು ಬಸುರಿ.... ಬವಕೆ ಅಂದು ಇಲ್ಲೇಬಿಟ್ಟು ಹೋದ್ರು...ಆ ಹೊಸಾಹೊಸ ಸೀರೆ ಉಟ್ಕೊಂಡು... ನಿಮ್ಮ ಕಣ್ಮುಂದೇನೆ ನಿಂತ್ಕೊಂಡಿದ್ದೇನೆ....ಅದನ್ನ ನೋಡಿ ಒಂದು ಮಾತಾದ್ರೂ ಹೇಳಿದ್ರಾ ?"–ಎಂದಳು.

ನಾನು ಸೋತು ಸಪ್ಪಗಾದೆ.

# ಎಂದೆಂದಿಗೂ ನಿಮ್ಮವಳೆ....*

'ಕಿಷ್ಕಿಂದ ವಿಲ್ಲಾ'
ತರಲೇಪೇಟೆ.
ದಿನಾಂಕ: ೨೮-೧-
ಪ್ರಾತಃಕಾಲ

ಹೊಳೆನೀರು-ಕಲ್ಲು ಅಂಡ್ ಕಂಪನಿ.

ಮಹಾಶಯರೆ,

ಕಳೆದ ಸಾರಿ ಬಟ್ಟೆ ಹಾಕಿದ್ದಾಗ, ಹಾಕಿದ್ದ ಒಂದು 'ಸ್ವೆಟರ'ನ್ನು ನೀವು ಕಳುಹಿಸಿಲ್ಲ. ಅದಕ್ಕೋಸ್ಕರ ಜವಾನನನ್ನು ಪುನಃ ಕಳುಹಿಸಿಕೊಡಬೇಕಾಯಿತು. ದಯವಿಟ್ಟು ಈ ಚೀಟಿ ತಂದಿರುವ ಜವಾನನ ಕೈಲಿ ಸ್ವೆಟರನ್ನು ಕಳುಹಿಸಿಕೊಡಿ. ಅದು ನನಗೆ ಅತ್ಯಂತ ಜರೂರಾಗಿ ಬೇಕಾಗಿದೆ.

ನಿಮ್ಮ ವಿಶ್ವಾಸಿ,
ವಿ. ರಮಣಿ.

* * * *

ದಿನಾಂಕ: ೨೮-೧-
ಸಂಧ್ಯಾಕಾಲ

ಮಹಾಶಯರೆ,

ಜವಾನನನ್ನು ಹಾಗೆಯೆ ಕಳುಹಿಸಿದರಂತೆ! ಸ್ವೆಟರನ್ನು ಹುಡುಕಿ ನಿಮ್ಮ ಜವಾನನೊಡನೆ ಕಳುಹಿಸುವುದಾಗಿ ಭರವಸೆ ಕೊಟ್ಟರಂತೆ. ಸ್ವೆಟರನ್ನು ಹುಡುಕುವುದು ಎಂದರೇನು ಬಂತು. ನೀವು ಎಜುಕೇಟೆಡ್ ಎಂದೂ, ಅತ್ಯಾಧುನಿಕ ವಾಷಿಂಗ್ ಯಂತ್ರೋಪಕರಣ ವ್ಯವಸ್ಥೆಯುಳ್ಳವರೆಂದೂ, ವ್ಯವಹಾರದಲ್ಲಿ ಸುಸ್ಪಷ್ಟವಾದವರೆಂದೂ ಕೇಳಲ್ಪಟ್ಟು ನಿಮಗೆ ನಾನು ಹಾಕಿದೆ. ದಯೆಯಿಟ್ಟು

---

*'ಮಾರ್ಗರೆಟ್ ಇಲಿಯನ್' ಎಂಬ ಮದುವೆಯಾದ ಹುಡುಗಿಯ 'ಆಲ್ ಫಾರ್ ದಿ ಬೆಸ್ಟ್' ಎಂಬ ಕತೆಯ ಭೂತಾಂತರ.

ಎಳ್ಳಷ್ಟೂ ತಡಮಾಡದೆ, ಸ್ವೆಟರ್ ಎಲ್ಲಾದರೂ ಇರಲಿ, ಏನಾದರೂ ಆಗಿರಲಿ, ಕಳುಹಿಸಿಕೊಡಿ. ನಾನು ಕಳುಹಿಸಿದ್ದ ಜವಾನ ನಮ್ಮ ಜವಾನನಲ್ಲ. ಬೇರೊಬ್ಬರ ಜವಾನ. ಅವನನ್ನು ಅನುಸರಿಸುವುದು ಕಷ್ಟ. ಆದ್ದರಿಂದ ನಿಮ್ಮ ಜವಾನನ ಕೈಲೇ ಕಳುಹಿಸಿ. ನಿಮ್ಮ ಜವಾನನನ್ನೇ ಎದುರು ನೋಡುತ್ತಿರುತ್ತೇನೆ.

ನಿಮ್ಮ ವಿಶ್ವಾಸಿ,

ವಿ. ರಮಣಿ.

*   *   *   *

ದೀನಾಂಕ: ೨೯–೨–

ಶ್ರೀಮತಿ ವಿ. ರಮಣಿಯವರಿಗೆ

ವಂದನೆಗಳು.

ನಿಮ್ಮ 'ಸ್ವೆಟರ್' ಇದೀಗ ನಮ್ಮ ಕೈಗೆ ಸಿಕ್ಕಿದೆ. ಅದನ್ನು ಈ ದಿನವೇ ನಮ್ಮ ಜವಾನನೊಂದಿಗೆ, ಕಳುಹಿಸಿಕೊಡುತ್ತಿದ್ದೇವೆ. ದಯೆಯಿಟ್ಟು ಸ್ವೀಕರಿಸುವುದು. ಇನ್ನು ಮುಂದೆ ಈ ರೀತಿ ಅವ್ಯವಸ್ಥೆಯಾಗದಂತೆ ಕಾಯಾ, ವಾಚಾ, ಮನಸಾ ಭರವಸೆ ಕೊಡುತ್ತೇವೆ.

ವಿಶ್ವಾಸ ಎಂದಿನಂತೆ ಇರುವುದೆಂದು ನಂಬಬಹುದೇ?

ಇಂತು,

ನಿಮ್ಮ ಮೆಚ್ಚಿಗೆಗಾಗಿ ಶ್ರಮಿಸುವ,
ಹೊಳೆ ನೀರ್ಗಲ್ ಕಂಪನಿ,
ರಿಜಿಸ್ಟರ್ಡ್ ಆಫೀಸ್: ರಜಕಾದ್ರಿ
ಡೊಂಕು ಬಾಲಯ್ಯನ ರಸ್ತೆ.
ಕಿರಚೂರು.

ಟೆಲಿಫೋನ್: 21 A
ಟೆಲಿಗ್ರಾಮ್ಸ್: 'ನೀರ್ಗಲ್'
ಫ್ಯಾಕ್ಟರಿ: ಪುರವಾಹಿನಿ ಉಪನಗರ.
ಕಿರಚೂರು.

ದಿನಾಂಕ : ೨೯–೨–

ಮಹಾಶಯರೆ,

ನೀವು ಕಳುಹಿಸಿದ್ದ 'ಸ್ವೆಟರ'ನ್ನು ಇದೀಗ ವಾಪಸು ಕಳುಹಿಸಿದ್ದೇನೆ. ಕಾರಣ, ಅದು ನನ್ನದಲ್ಲ. ನಾನು ಕೆಂಪು ಸ್ವೆಟರನ್ನು ನಮ್ಮಪ್ಪನಾಣೆಗೂ ಹಾಕುವುದಿಲ್ಲ. ಇದನ್ನು ನೀವು ಯಾವತ್ತೂ ಗಮನಿಸುವುದು. ನಾನು ಚಿಕ್ಕವ ನಾಗಿದ್ದಾಗಲೂ ಅಷ್ಟೆ. ಕೆಂಪೆಂದರೆ ಕಿರಿಚಿಕೊಳ್ಳುತ್ತಿದ್ದೆ.

ನಮ್ಮ 'ಸ್ವೆಟರ್' ಹುಡುಕುವುದಕ್ಕೆ 'ತರದೂದು' ಮಾಡಿ.

ಇಂತು ನಿಮ್ಮವ,
ಶ್ರೀಯುತ ವೆಂಕಟರಮಣಿ.

*　　*　　*　　*

ದಿನಾಂಕ : ೧–೩–

ಮಹಾಶಯರೆ,

ನಾವು ನಿಮ್ಮನ್ನು ಗಂಡುಸರೆಂದು ತಿಳಿದುಕೊಳ್ಳದಿದ್ದುದಕ್ಕಾಗಿ ನಿಮ್ಮ ಕ್ಷಮಾಪಣೆಯನ್ನು ಮತ್ತೆ ಮತ್ತೆ ಕೇಳುತ್ತೇವೆ. ನಿಮ್ಮ ಹೆಸರನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಆದ ಗುಮಾಸ್ತೆಯ ದೋಷವಿದು. ಅನ್ಯಥಾ ಭಾವಿಸ ಬಾರದಾಗಿ ವಿನಂತಿ.

ನೀವು ಕೆಂಪು ಉಣ್ಣೆಯ ಸ್ವೆಟರನ್ನು ಯಾವತ್ತೂ ಹಾಕಿಕೊಳ್ಳುವುದಿಲ್ಲ ವೆಂಬುದನ್ನು ನಾವು ಗಮನಿಸಿದೆವು. ನಮ್ಮ ಕಛೇರಿಯ ಕೆಲಸಗಾರರಿಗೂ ಅದನ್ನು ತಿಳಿಸಲಾಗಿದೆ. ನಿಮಗೆ ಇನ್ನಾವುದಾದರೂ ಬಣ್ಣದ ಉಣ್ಣೆಯ ಸ್ವೆಟರ್ ಆಗದಿದ್ದರೆ ಅದನ್ನೂ ದಯವಿಟ್ಟು ತಿಳಿಸಿ. ಅದನ್ನು ನಾವು ಮೊದಲೇ ಮನವರಿಕೆಮಾಡಿಕೊಳ್ಳುತ್ತೇವೆ.

ನಿಮ್ಮ ಸ್ವೆಟರನ್ನು ಹುಡುಕುವುದಕ್ಕೆ ಸಹಾಯಕವಾಗುವಂತೆ, ಯಾವ ರೀತಿಯ, ಯಾವ ಅಳತೆಯ ಸ್ವೆಟರನ್ನು ನೀವು ಇಷ್ಟಪಡುತ್ತೀರಿ, ಇಷ್ಟಪಡುವ 'ಸ್ವೆಟರ್'ನ ಬಣ್ಣವಾವುದು ತಿಳಿಸಿ. ನಿಮ್ಮ ಉತ್ತರವನ್ನು ಎದುರು ನೋಡುತ್ತಿದ್ದೇವೆ.

ನಿಮ್ಮ ವಿಶ್ವಾಸ ಪಾತ್ರ,
ಹೊಳೆನೀರ್ಗಲ್ ಕಂಪೆನಿ.

ದನಾಂಕ: ೩-೩-

ಮಹಾಶಯರೆ,

ನನಗೆ ನನ್ನ ಅಳತೆ ಗೊತ್ತಿಲ್ಲ. ನಮ್ಮ ದರ್ಜಿಗೆ ಗೊತ್ತಿದೆ. ಆದರೆ ಅವನು ಹೇಳೋಲ್ಲ. ಬಟ್ಟೆಯನ್ನು ಅದಕ್ಕೆ ಸರಿಯಾಗಿ ಎಲ್ಲಿ ತಂದುಬಿಡುತ್ತಾರೋ ಎಂಬ ಭೀತಿ ಅವನಿಗೆ! ಅದರ ಮೇಲೆ ನನ್ನ ಸ್ವೆಟರ್ ಕೈಯಿಂದಲೇ ಹಾಕಿದ್ದು. 'ಮಾರ್ಕಿಗೆ'ಯದಲ್ಲ. ಆಟಗಾರರು ಹಾಕಿಕೊಳ್ಳುವಂಥದು. ಬಿಗಿಯಾದ ಅಂಗಿಯಂತೆ ಮೈಗೆ ಹತ್ತಿಕೊಳ್ಳುವುದು. ಹಾಕಿಕೊಳ್ಳುವುದಕ್ಕೂ, ತೆಗೆದು ಹಾಕುವುದಕ್ಕೂ ಮತ್ತೊಬ್ಬರ ಸಹಾಯವೂ, ಅರ್ಧಗಂಟೆಯೂ ಬೇಕಾಗುವುದು.

ಹೇಗಾದರೂ, ನಿಮಗೆ ನನ್ನ ಗಾತ್ರದ ಬಗ್ಗೆ ಭಾವನೆ ಕೊಡಲೇ ಬೇಕಾಗಿರುವುದರಿಂದ ಒಂದು ಭಾವಚಿತ್ರ ಲಗತ್ತಿಸಿ ಕಳುಹಿಸಿದ್ದೇನೆ. ನಾನು ಈಜುಗೊಳಕ್ಕೆ ಧುಮುಕುವಾಗ ಹಾಕಿಕೊಳ್ಳತಕ್ಕ ಚಲ್ಲಣ, ಚಗೆಯನ್ನ ಧರಿಸಿ ನಿಂತ ಭಂಗಿಯಲ್ಲಿದೆ, ಆ ಭಾವಚಿತ್ರ ದಯವಿಟ್ಟು 'ಸ್ವೆಟರ'ನ್ನು 'ತಲಾಷ್' ಮಾಡಿಸಿಕೊಡಿ.

ನಿಮ್ಮವನೇ,
ವೆಂಕಟರಮಣಿ.

**ಮರೆತ ಮಾತು:**

ನನಗೆ ಈಜಲು ಬರುವುದಿಲ್ಲ.
ಅದಕ್ಕಾಗಿಯೇ ಆ 'ಭಾವಚಿತ್ರ' ತೆಗೆಸಿರುವುದು. ವಿ. ರ.

* * * *

ದೀನಾಂಕ: ೫-೩-

ಮಹಾಶಯರೆ,

ನಿಮ್ಮ ಭಾವಚಿತ್ರ ಕಳುಹಿಸಿದ್ದಕ್ಕೆ ನಾವು ನಿಮ್ಮನ್ನು ಎಷ್ಟು ವಂದಿಸಿದರೂ ಸಾಲದು. ಅದನ್ನು ನಮ್ಮ ರಿಜಿಸ್ಟರ್ಡ್ ಆಫೀಸಿನಲ್ಲಿ ಕಟ್ಟು ಹಾಕಿಸಿ ತೂಗು ಹಾಕಿದ್ದೇವೆ. ನಮ್ಮಲ್ಲಿ ಕೆಲಸಮಾಡುವ ಪ್ರತಿಯೊಬ್ಬರೂ ಆ ಭಾವಚಿತ್ರದ ಕಡೆಗೆ ಕಣ್ಣು ಹೊರಳಿಸಬೇಕೆಂದೂ, ಆ ಸೈಜಿಗೆ ಆಗುವ ಸ್ವೆಟರುಗಳೆಲ್ಲವನ್ನೂ ತೆಗೆದಿರಿಸಬೇಕೆಂದೂ ತಿಳುವಳಿಕೆ ಕೊಡಲಾಗಿದೆ. ನಮ್ಮ ಫ್ಯಾಕ್ಟರಿಗೂ ಆ ಭಾವಚಿತ್ರವನ್ನು ಕಳುಹಿಸಿಕೊಟ್ಟಿದ್ದೇವು.

ನಿಮ್ಮ ಸ್ವೆಟರಿನಲ್ಲಿ ನಿಮ್ಮ ಹೆಸರಿನ ಗುರುತಿದೆಯೆಂದು ನಾವು ಭಾವಿಸುತ್ತೇವೆ.

ನಿಮ್ಮ,
ಹೊಳೆ ನೀರ್ಗಲ್ ಕಂಪೆನಿ.

* * * *

ದಿನಾಂಕ : ೭–೩–

ಗೆಳೆಯರೆ,

ಆ ಸ್ವೆಟರಿನ ಮೇಲೆ ನನ್ನ ಹೆಸರಿನ ಗುರುತಿಲ್ಲ! ಕೇವಲ ಶಾಲಾ ಬಾಲಕರು ಮತ್ತು ಹೊಸದಾಗಿ ಮದುವೆಯಾದ ಪುರುಷರು ತಮ್ಮ ಬಟ್ಟೆಯ ಮೇಲೆ ತಮ್ಮ ಹೆಸರಿನ ಗುರುತನ್ನು ಹಾಕಿಸಿಕೊಳ್ಳುತ್ತಾರೆ. ನಾನು ಎರಡು ವರ್ಗಕ್ಕೂ ಸೇರಿಲ್ಲ. ನಾನು ಬಾಡಿಗೆಗಿರುವ ರೂಮಿನ ಮನೆಯ ಮುದುಕಿಗೆ 'ನನ್ನ ಬಟ್ಟೆಗೆ ಕಸೂತಿ ದಾರದಲ್ಲಿ ನನ್ನ ಹೆಸರನ್ನು ಹಾಕಿಕೊಡಿ' ಎಂದು ಹೇಳಲಾರೆ! ಏಕೆಂದರೆ ಆಕೆ ವೃದ್ಧಮಾತೆಯಂತಿಲ್ಲ. ದಕ್ಷಿಣ ಆಫ್ರಿಕಾದ ಅಮೆಜಾನ್ ನದಿಯಂಥವಳು....ಮಾತೂ ಅಷ್ಟೆ. ಗಾತ್ರವೂ ಅಷ್ಟೆ!

ನಿಮ್ಮ ವಿಶ್ವಾಸಿ,
ವಿ. ರಮಣಿ.

* * * *

ದೀನಾಂಕ : ೯–೩–

ಗೆಳೆಯರೆ,

ನಿಮ್ಮ ಮನೆಯ ಮುದುಕಿ ವೃದ್ಧ ಮಾತೆಯಂತಿಲ್ಲವೆಂದೂ ಅಮೆಜಾನ್ ಪ್ರಕೃತಿಯವಳೆಂದೂ ನಾವು ತಿಳಿದುಕೊಂಡೆವು. ಇದು ನಮಗೆ ಬಹಳ ವಿಷಾದ ವೆನಿಸಿದೆ.

ನಿಮ್ಮ ಸ್ವೆಟರ್ ಹುಡುಕುವುದು ಇನ್ನೂ ಮುಂದುವರಿಯುತ್ತಿದೆ. ಈ ವಿಷ ಯವನ್ನು, ನಿಮಗೆ ಪೂರ್ಣ ತೃಪ್ತಿಯಾಗುವಂತೆ, ಬಗೆಹರಿಸಬೇಕೆಂದು ನಾವು ಕಾತರರಾಗಿದ್ದೇವೆ. ಆ ರೀತಿ ಭರವಸೆ ಕೊಡಲು ನಾವು ಅಪೇಕ್ಷಿಸುತ್ತೇವೆ.

ನಿಮ್ಮ ವಿಶ್ವಾಸಿ,
ಹೊಳೆ ನೀರ್ಗಲ್ ಅಂಡ್ ಕಂಪೆನಿ.

ದಿನಾಂಕ: ೫-೪-

ಗೆಳೆಯರೆ,

ನಿಮ್ಮಿಂದಾಗಿ ನಾನು ಈಗ ಮನೆ ಬದಲಾಯಿಸಬೇಕಾಯಿತು. ಬದಲಾಯಿಸಿದೆ. ಬಹುಶಃ ನಮ್ಮ ಮನೆ ಮುದುಕಿ 'ಆಕೆ ವೃದ್ಧಮಾತೆಯಲ್ಲವೆಂದೂ, ಅಮೆಜಾನ್ ಪ್ರಕೃತಿಯವಳೆಂದೂ, ನಾನು ಬರೆದಿದ್ದಕ್ಕೆ ನೀವು ವಿಷಾದ ಸೂಚಿಸಿ ಬರೆದಿದ್ದ ಪತ್ರವನ್ನು ಅವಳು ಓದಿರಬೇಕು. ಅದರಿಂದಲೇ ನನಗೆ ಮನೆಯಿಂದ ಉಚ್ಚಾಟನೆ....

ನನ್ನ ಹೊಸ ಮನೆಯ ವಿಳಾಸ 'ಸುಖವಿಲ್ಲಾ' ಸಂತೇಪೇಟೆ. 'ಸುಖ ವಿಲ್ಲಾ' ಅನ್ನುವುದು ಅಂಚೆಯವನಿಗೂ ಗೊತ್ತಿದೆ.

ನಿಮ್ಮ ವಿಶ್ವಾಸಿ,
ರಮಣಿ.

**ಮುರಿತ ಮಾತು:**

ಸ್ವೆಟರ್ ಏನಾದರೂ ಸಿಕ್ಕಿತೆ? ಆ ಬಗ್ಗೆ ತಿಳಿಸಿ.

ರ.

* * * *

ದೀನಾಂಕ: ೬-೪-

ಗೆಳೆಯರೆ,

ನಿಮ್ಮ ವಿಳಾಸ. ಸಂತೋಷ. ಅದನ್ನು ನಾವು ಗುರುತಿಸಿಕೊಂಡಿದ್ದೇವೆ. ಇನ್ನು ಮುಂದಿನ ಪತ್ರಗಳೆಲ್ಲ ಅದೇ ವಿಳಾಸಕ್ಕೆ ಬರುತ್ತವೆ. ನಮ್ಮ ಮುಖ್ಯ ವ್ಯವಸ್ಥಾಪಕರೇ ತಮ್ಮ ಸ್ವಂತ ಗಮನ ಕೊಟ್ಟಿದ್ದರೂ ಸಹ ನಿಮ್ಮ ಸ್ವೆಟರಿನ ಬಗ್ಗೆ ಏನೂ ಗೊತ್ತಾಗಿಲ್ಲ. ನಿಮ್ಮ ಸ್ವೆಟರನ್ನು ಹುಡುಕುವ 'ಸಾಹಸ' ದಲ್ಲಿ ನಾವಿನ್ನೂ ಯಶಸ್ವಿಯಾಗಿಲ್ಲ.

ದಯವಿಟ್ಟು ನೀವು ನಿಮ್ಮ ಸ್ವೆಟರಿನ ಬೆಲೆಯನ್ನು ತಿಳಿಸಿದರೆ, ಅದರಿಂದ ನಿಮಗಾದ ನಷ್ಟವನ್ನು ಭರ್ತಿಮಾಡುತ್ತೇವೆ. ಈ ವಿಷಯವನ್ನು ಮುಂದುವರಿಸಲು ಸಂಕೋಚವಾಗುತ್ತದೆ.

ವಿಶ್ವಾಸ ಏಕರೀತಿ ಇರಲಿ,
ನಿಮ್ಮದೇ ಆದ:
ಹೊಳೆ ನೀರ್ಗಲ್ ಕಂಪನಿ.

ದಿನಾಂಕ: ೮-೪-

ಮಹಾಶಯರೆ,

ನಿಮ್ಮ ಪತ್ರ. ಏರು-ಪೇರು. ನೌಕರಿ ದಂಧೆಗಳಲ್ಲಿ ನಿರಾಸಕ್ತಿ.

ನನಗೆ ನಿಮ್ಮ ಪರಿಹಾರ ಬೇಕಾಗಿಲ್ಲ. ನನಗೆ ನನ್ನ ಸ್ವೆಟರ್ ಬೇಕು. ಅದರ ಬಗ್ಗೆ ನನಗೆ ಅತ್ಯಂತ ಹೆಚ್ಚಿನ ಆದರವಿದೆ. ಮೂಢ ಪ್ರೇಮವಿದೆ, ಅದು ನನ್ನ ಪಾಲಿಗೆ ಬೆಲೆ ಕಟ್ಟಲಾಗದ ವಸ್ತು. ಏಕೆಂದರೆ ಅದನ್ನು ಹೆಣೆದದ್ದು ನನಗಾಗಿ. ಕೇವಲ ನನಗೊಬ್ಬನಿಗಾಗಿ. ಅದನ್ನು ಹೆಣೆದದ್ದು ನನ್ನ ಮೆಚ್ಚಿನ ಹುಡುಗಿ. ನಾನು ಅವಳನ್ನೇ ಮದುವೆಯಾಗಬೇಕೆಂದಿದ್ದೇನೆ. ಅವಳಿಗಾಗಿಯೇ ನಾನು ದುಡಿದು ಧನ ಸಂಗ್ರಹಿಸುತ್ತಿರುವುದು.

ನೋಡಿ, ಇದುವರೆಗೂ ಮರೆತೇ ಇದ್ದೆ. ಅದರಲ್ಲಿ ಕುತ್ತಿಗೆಯ ಮುಂದಿನ ತುದಿಯಲ್ಲಿ ಒಳಭಾಗಕ್ಕೆ 'ಎಂದೆಂದಿಗೂ ನಿಮ್ಮವಳೇ ಆದ ತ್ರಿಪುರ' ಎಂದು ಅದೇ ಬಣ್ಣದ ದಾರದಲ್ಲಿ ಕಸೂತಿ ಹಾಕಿದ್ದಾಳೆ. ಈ ಗುರುತು ನಿಮಗೆ ಗೊತ್ತಾದ ಮೇಲೆ ಹುಡುಕುವುದು ಸುಲಭವಾಗಬಹುದು. ದಯವಿಟ್ಟು ತೀವ್ರವಾಗಿ ಹುಡುಕಿಸಿ. ಸಿಕ್ಕಿದ ಕೂಡಲೆ ನನಗೆ ತಲುಪಿಸಿ.

ನಿಮ್ಮ....
ರಮಣಿ.

* * * *

ದೀನಾಂಕ: ೧೦-೪-

ಮಹಾಶಯರೆ,

ನಿಮ್ಮ ಸ್ವೆಟರನ್ನು ನಾವು ಗೊತ್ತು ಹಚ್ಚಿದೆವೆಂದು ತಿಳಿಸಲು ತುಂಬಾ ಸಂತೋಷಿಸುತ್ತೇವೆ. ಈ ಸ್ವೆಟರು ಬಹಳ ದಿನಗಳಿಂದೂ ಇಲ್ಲೇ ಇತ್ತು. ಆದರೆ ಆ ರೀತಿಯ 'ಸ್ವೆಟರು'ಗಳು ಮೂರು ನಮ್ಮಲ್ಲಿಗೆ ಬರುತ್ತಿವೆ. ಮೂರರ ಮೇಲೂ, ನೀವು ಹೇಳಿದ ಜಾಗದಲ್ಲೇ 'ಎಂದೆಂದಿಗೂ ನಿಮ್ಮವಳೇ ಆದ ತ್ರಿಪುರ' ಎಂದು ಕಸೂತಿ ಇದ್ದದ್ದರಿಂದ ನಮಗೆ ಅನುಮಾನವಾಗಿತ್ತು. ಆ ಮೂವರ ಪೈಕಿ ಯಾರಿಗೆ ಇವುಗಳನ್ನು ಕಳುಹಿಸಿಕೊಡಬೇಕೆಂದು ಬೃಹದ್ ಸಮಸ್ಯೆಯಾಗಿತ್ತು, ಆದ್ದರಿಂದ ಸುಮ್ಮನಿದ್ದೆವು.

ನಿಮ್ಮ ಸ್ಪೆಟರನ್ನು ಈ ದಿನ ಕಳುಹಿಸಲಾಗಿದೆ....ತೊಂದರೆಯಾದದ್ದಕ್ಕೆ ಕ್ಷಮಿಸಿರಿ. ಇನ್ನೆಂದಿಗೂ ಈ ರೀತಿಯಾಗಲಿಕ್ಕಿಲ್ಲ.

ನಿಮ್ಮ ಸಂಪೂರ್ಣ ತೃಪ್ತಿಗನುಸಾರವಾಗಿ ಈ ವಿಷಯವನ್ನು ಇತ್ಯರ್ಥ ಮಾಡಿದ್ದೇವೆಂದು ನಾವು ಭಾವಿಸುತ್ತೇವೆ.

ಇಂತು....

ಹೊಳೆನೀರ್ಗಲ್ ಕಂಪನಿ.

* * * *

**ಲೇಖಕನ ಮಾತು :** ಅಂದಿನಿಂದ ವಿ. ರಮಣಿ ಪತ್ತೆಯಿಲ್ಲ!

# ಗತವೈಭವ

ಇದ್ದಕ್ಕಿದ್ದಂತೆ ಅಪ್ಪಾಜಿ ಹಾಸಿಗೆಯ ಮೇಲೆ 'ಕಚಗುಳಿ' ಇಡಿಸಿಕೊಂಡ ಹೆಣ್ಣುಹುಡುಗಿಯಂತೆ 'ಚಂಗನೆ' ಎಗರಿ ನಿಂತರು. ಸೊಂಟವನ್ನು ಬಿಲ್ಲಿನಂತೆ ಬಗ್ಗಿಸಿ, ಒಳ ಅಂಗಿಯ ಕೊನೆಗಳನ್ನು ಎಳೆದು ಜೋಡಿಸಿಕೊಂಡು, ಅಲ್ಲಿಲ್ಲದ ಗುಂಡಿಗಳನ್ನೂ ಕಾಜಗಳನ್ನೂ ಹುಡುಕತೊಡಗಿದರು. ಅವು ಸಿಕ್ಕಲಿಲ್ಲ. ತಲೆಯ ಮೇಲೆ ಕೈಯಾಡಿಸಿದರು, ಪೇಟ ಪತ್ತೆಯಿಲ್ಲ. ಗಾಬರಿಯಾಯಿತು.... ಸೊಂಟ ತಡಕಿದರು 'ಪ್ರನಾಳ'ದ ಷರಾಯಿಗಳೂ....ಗೈರುಹಾಜರಿ.

'ಆಫೀಸರು....ಕಛೇರಿ....ಆಯಿತು ಕೆಲಸ. ಮುಗಿಯಿತು ಕತೆ'— ಎಂದು ಹಂಬಲಿಸುತ್ತ ಕೈಕೈ ಹಿಸುಕಿಕೊಂಡು ನಖಶಿಖಾಂತ ನಡುಗಿದರು.

'ಇಲ್ಲಾ... ಇದೊಂದು ಸಾರಿ ಮನ್ನಿಸಿ'—ಎಂದು ಅಂಗಲಾಚುತ್ತ ದೇಹಾದ್ಯಂತ 'ಥರ'ಗುಟ್ಟಿದರು. ಪಂಚೆಯ ಅಂಚಿನಲ್ಲಿ ಏರ್ಪಟ್ಟಿದ್ದ ಒಂದು ತೂತು ಈ ನಗೆತವನ್ನೂ ಕಾಲಿನ ಹೆಬ್ಬೆರಳನ್ನೂ ನಿರೀಕ್ಷಿಸುತ್ತಿತ್ತೋ ಎಂಬಂತೆ, ಅನಾಮತ್ತು ಹೆಬ್ಬೆರಳನ್ನು ಒಳಸೆಳೆದುಕೊಂಡು ಹಿಗ್ಗಿತು. ಪಂಚೆಯ ಈ ಅಂಚ್ಛೇದನ, ಅದರ ಬೆಲೆ....ಅಪ್ಪಾಜಿಗೆ ನರಗಳನ್ನೆಲ್ಲಾ ನಿರ್ಜೀವ ಮಾಡಿತು. ಈ ಗಲಾಟೆಗೆ ಅಮ್ಮನಿಗೆ ಎಚ್ಚರಿಕೆಯಾಯಿತು.

"ಯಾಕ್ರೀ....ಯಾಕ್ರೀ....ಹೀಗಾಡ್ತಾ ಇದೀರಿ...." ಎಂದು ಭಯಾಶ್ಚರ್ಯಗಳಿಂದ ಕೇಳಿದಳು. ಎದ್ದು ಅಪ್ಪಾಜಿಯ ಭುಜ ಹಿಡಿದು ಮೋಟಾರಿನ ಗೇರಿನಂತೆ ಪಕ್ಕಕ್ಕೆ, ಕೆಳಕ್ಕೆ ಮೇಲಕ್ಕೆ ಜಗ್ಗಾಡಿದಳು. ಅಪ್ಪಾಜಿ ಅಮ್ಮನ 'ಛೇರಿ' ಗನುಗುಣವಾಗಿ ತಟ್ಟಾಡಿದರು. 'ಆ....ಹೂಂ'—ಎಂದು ಹಲುಬಿದರು. 'ಹುಚ್ಚುಗಿಚ್ಚೇನಾದ್ರೂ ಹಿಡೀತೇನ್ರಿ....ಬೆಳಗ್ಗೆ ಆಸ್ಪತ್ರೆಗೆ' ಎಂದು ಅಪ್ಪಾಜಿಯ ಕಿವಿಯ ಹತ್ತಿರ ಕಿರಿಚಿದಳು ಅಮ್ಮ. ಅಪ್ಪಾಜಿ ನಿದ್ದೆಯಲ್ಲಿ ಕುಂಭಕರ್ಣನ ಭಾವನೈದ-ಅವರ ತಂಗಿ ಮಹಾನಿದ್ದಿಗಳಂತೆ! ಅದನ್ನು ಅಮ್ಮ ಆಗಾಗ್ಗೆ ಹೇಳುತ್ತಾಳೆ. ಅಮ್ಮನ 'ಕಿವಿಪರಚು' 'ಅಪ್ಪಾಜಿಯ ಅಮಲನ್ನು ಹರಿಸಿ ಹತ್ತೋಟಿಗೆ ತಂದಿತು. 'ಕೊಕೆಯಿನ್' ಇಂಜಕನ್ ಪ ಬಾವಳಿದ.

ಶಸ್ತ್ರಿತ ರೋಗಿಯಂತೆ ಅಪ್ಪಾಜಿಗೆ ಪ್ರಜ್ಞೆ ಬರತೊಡಗಿತು. ಕಣ್ಣುಬಿಟ್ಟರು. ಸುತ್ತ ನೋಡಿದರು.

ಇದು ಕಛೇರಿಯಲ್ಲ, ಮನೆ. ನಾನು ಆಫೀಸರ ಮುಂದೆ ನಿಂತಿಲ್ಲ, ಹೆಂಡತಿಯ ಮುಂದೆ ನಿಂತಿದ್ದೇನೆ ಎಂದು ಅಪ್ಪಾಜಿಗೆ ಅರಿವಾಗುತ್ತಲೇ, ಅವರ ಸೊಂಟ ಸರಳರೇಖೆಯಾಯಿತು. ನರಗಳು ನಾಡಿಗೆ ಅನುಕೂಲಿಸಿದವು. ಅಮ್ಮನ ಮುಂದೆ ನಿಂತಿದ್ದು 'ವೀರಣ್ಣನ ಮುಂದೆ ಬಸವಣ್ಣ' ನಿಂತಂತೆ ಅಪ್ಪಾಜಿಗೆ ಭಾಸವಾಗಿ ಅವರಿಗೆ ನಾಚಿಕೆಯಾಯಿತು. ಅಮ್ಮನ ಪ್ರಶ್ನೆಗೆ 'ಏನೋ ಒಂದು ಕನಸು ಕಣೇ' ಎಂದು ಹೇಳುತ್ತ ಕನವರಿಕೆಯಿಂದ ಎಚ್ಚೆತ್ತು ಆಕಳಿಸಿದರು. ಹಳೇ ಸೈಕಲ್ಲಿನ ಹ್ಯಾಂಡಲ್ಲಿನಂತೆ ಸಿಕ್ಕಿದ ಕಡೆ ಸೊಂಟ ತಿರುವಿ, ಮೈ ಮುರಿದು, ಕೈ ಕೊಡವಿ, ಕಾಲು ಜಾಡಿಸಿ, ಕುತ್ತಿಗೆ ನುಲಚಿ (ಅಪ್ಪಾಜಿಯ ಕುತ್ತಿಗೆ ಮಾತ್ರ!) ಲಟಿಕೆಗಳನ್ನು ಹೊರಡಿಸಿದರು.

ಆಗ ಬೆಳಗಾಯಿತು.

ಈ ರೀತಿಯ ಕನವರಿಕೆ ಅಪ್ಪಾಜಿಗೆ ಹೊಸದೇನೂ ಅಲ್ಲ. ಅವರು ಸರ್ಕಾರಿ ಕೆಲಸಕ್ಕೆ ಸೇರಿದ ಮಾರನೆಯ ದಿನದಿಂದ ಇದೇ ರೀತಿಯಾಗುತ್ತಿದ್ದುದರಿಂದ ಅಮ್ಮನಿಗೂ ಇದರಿಂದ ಗಾಬರಿಯಾಗಲಿಲ್ಲ. ಇಂಥ ಕನವರಿಕೆಯಾದ ಮೇಲೆ ಅಪ್ಪಾಜಿ ಪುನಃ 'ದಿಂಬೋನ್ಮುಖ'ರಾಗತೊಡಗುತ್ತಾರೆ. ಆಗ ಅಮ್ಮ :

"ಹಾಸಿಗೆ ಸುತ್ತಿಡಬೇಕು ಏಳಿ.... ಬೇಕಾದಷ್ಟು ಕೆಲಸ ಇದೆ" ಎನ್ನುತ್ತಾಳೆ.

"ತಡಿಯೇ ಕೊಂಚ ಮಲಗಿಕೋಬೇಕು" ಎನ್ನುತ್ತಾರೆ ಅಪ್ಪಾಜಿ.

"ಪಾಪ! ಮಲಗಿಕೊಳ್ಳಿ ಇನ್ನೂ .... ಬೆಳಿಯೋ ಮಗು.... ಇನ್ನೂ ಬೆಳಕು ಹರಿದಿಲ್ಲ!"

"ಅಲ್ಲವೇ ನಾನು ಬಲಮಗ್ಗುಲಲ್ಲಿ ಎದ್ನೊ, ಎಡಮಗ್ಗುಲಲ್ಲಿ ಎದ್ನೊ ಮರ್ತ್ಹೋಗಿದೆ"

"ಸರಿ.. . ನಿಮ್ಮದಿದ್ದೇ ಇದೆ 'ಗಿರಾಗತಿ'...."

"ಎದ್ದ ತಕ್ಷಣ ದೇವರ ಫೋಟೊ ನೋಡಲಿಲ್ಲ"

"ನನ್ನ ಮುಖ ನೋಡಿದ್ರೆಲ್ಲಾ...."

"ಸರಿಯಾಗೇ ಹೋಯ್ತು."

"ಪಾಪ.... ಈಗೇನು ಕೆಟ್ಹೋಗಿರೋದು ನನ್ನ ಮುಖ ನೋಡಿ"

"ನಿನ್ನ ಮುಖಾನೇ....ಕೆಟ್ಹೋಗಿರೋದು...."

"ಅಂದ್ರೆ...."

"ಮೊದಲು ಶಾರಿಯಾಗಿದ್ದ ನೀನು ಈಗ ಚಾಮುಂಡಿ."

ಹೀಗಂದಾಗ ಅಮ್ಮನಿಗೆ ರೇಗುತ್ತೆ. ಅಪ್ಪಾಜಿ ರಗ್ಗಿನಲ್ಲಿ ಹುದುಗಿಕೊಳ್ಳುತ್ತಾರೆ. ಅರ್ಧಾಂಗಿಗೆ ಕೋಪ ಬಂದಾಗ ಅರ್ಧ ಮೈಲಿ ದೂರದಲ್ಲಿರಬೇಕೆಂಬುದು ಅಪ್ಪಾಜಿಯ 'ಸ್ವತಃ ಸಿದ್ಧಪ್ರಮಾಣ.' ಅವಳಿಗೆ ಕೋಪ ಬಂದಾಗ ನಾವು ಹುಷಾರಾಗಿರಬೇಕು....ಇಲ್ಲವಾದರೆ....

ಸ್ತ್ರೀಯರು ಚಂಚಲರು. ಅಂತೆಯೇ ಅವರ ಕೋಪವೂ ಚಂಚಲ. ಕೋಪ ಬರುವುದೂ ಬೇಗ, ಹೋಗುವುದೂ ಬೇಗ. ಅಮ್ಮನಿಗೂ ಅಷ್ಟೆ! ಅಪ್ಪಾಜಿಯು ಮುಖವನ್ನು ರಗ್ಗಿನಿಂದ ಹೊರತೆಗೆಯುವ ಹೊತ್ತಿಗೆ ಅಮ್ಮನ ಮೂಗಿನ ಮೇಲಿದ್ದ ಕೋಪ ಆವಿಯಾಗಿ ಹೋಗಿ, ತುಟಿಯಲ್ಲಿ ತುಂಟು ನಗೆ ತುಳುಕುತ್ತದೆ. ಅಲ್ಲಿಗೆ ಅಪ್ಪಾಜಿಯ ಹೆಂಡಾಂತರ (ಇದು ಗಂಡಾಂತರದ ಸ್ತ್ರೀಲಿಂಗ, ಹೆಂಗಸರಿಂದ ಸಂಭವಿಸುವ ಗಂಡಾಂತರ) ದೂರವಾದಂತೆ. .

"ಅಲ್ರೀ....ಏಕೆ ಅಷ್ಟೊಂದು ಭಯಪಟ್ಟರಿ....ಏನು ಕನಸು ಅದು ?"

"ಏನೂ ಇಲ್ವೇ, ಲಂಚನಿರೋಧ ಶಾಖೆಯ ಅಧಿಕಾರಿಗಳಿಗೆ ನನ್ನ ಬಗೆಗೆ ಹೋಗಿರುವ 'ಮೂಗರ್ಜಿ'ಗಳ ಮೇಲೆ ವಿಚಾರಣೆಯಾಯಿತಲ್ಲಾ. ಅದೇ ಕನಸು...."

"ನೀವು ಲಂಚಾ ತಗೋತೀರಿ ಅಂತ ಅಷ್ಟೊಂದು ಪುಕಾರಿದೆ ...ಕೊಂಚ ಹುಷಾರಾಗಿರಬೇಡವೆ ?" ಎನ್ನುತ್ತಾಳೆ ಅಮ್ಮ.

"ಬಿಡೇಬಿಡೇ ಇಂತಹವೆಷ್ಟೊ ನೋಡಿದ್ದೀನಿ....ಈ ವಯಸ್ಸಿಗೆ" ಎನ್ನುತ್ತಾರೆ ಅಪ್ಪಾಜಿ.

ಆದರೆ ಈ ದಿನ ಅಪ್ಪಾಜಿ ಅಮ್ಮ ಅಷ್ಟು ಮಾತಾಡಲಿಲ್ಲ. ಅವರು ಮಾತು ಆರಂಭಿಸುವ ವೇಳೆಗೆ ಸರಿಯಾಗಿ ಅಮ್ಮನ ಆರನೆಯ ಮಗು ಎದ್ದು ಅಳತೊಡಗಿತು. ಅವಳನ್ನು ಸುಧಾರಿಸುವುದಕ್ಕೆ ಅಮ್ಮನೂ, ಪ್ರಾತಃಕಾಲದ ವಾಕಿಂಗ್‌ಗೆ ಅಪ್ಪಾಜಿಯೂ ಹೋದರು. 'ಇವತ್ತೂ ಇಷ್ಟೊಂದು ಅವಸರವೇ ?' ಎಂದು ಅಮ್ಮ ಕೇಳಿದ್ದಕ್ಕೆ ಅಪ್ಪಾಜಿ ರೇಗಿದರು. ಅಮ್ಮ ಮುಂದೆ ಮಾತನಾಡಲಿಲ್ಲ.

ವಾಕಿಂಗ್‌ನಿಂದ ಬಂದ ಅಪ್ಪಾಜಿ 'ಉರಉರ' ಅನ್ನುತ್ತಲೇ ಇದ್ದರು. ವಾಕಿಂಗ್ ಹೋದಾಗ ಏನಾಗಿತ್ತೊ ಯಾರಿಗೆ ಗೊತ್ತು! ಬಂದವರೇ ಚೌರದ ಸೆಟ್ಟು ಕೇಳಿದರು.

'ನನಗೆ ಕೈಬಿಡುವಿಲ್ಲ, ನೀವೇ ತಗೊಳ್ಳಿ' ಅಂದರು ಅಮ್ಮ. ಉರಿಯುವ ಕೋಪಕ್ಕೆ ಹೊಗೆ ಹಾಕಿದ ಹಾಗಾಯಿತು ಅಪ್ಪಾಜಿಗೆ. ಅವರ ಕೋಪವಿಮ್ಮಡಿಸಿತು. ಅವರ ತರಹವೇ ಬೇರೆಯಾಯಿತು. ಚೌರದ ಸೆಟ್ಟನ್ನು ಹುಡುಕಿಕೊಂಡು ಮಾಡಿಕೊಂಡರು. ಅವರು 'ಒರಟಾಪರಟ' ಚೌರ ಮಾಡಿಕೊಳ್ಳುತ್ತಿದ್ದ ಸದ್ದು ಅಡಿಗೆ ಮನೆಗೂ ಕೇಳಿಸುತ್ತಿತ್ತು. ಚೌರದ ಲೋಟವನ್ನು ಬಚ್ಚಲುಮನೆಗೆ ತಂದು ಕುಕ್ಕಿದರು. ತಂಬಿಗೆಯಲ್ಲಿ ನೀರು ತುಂಬಿಟ್ಟಿರಲಿಲ್ಲ. ಅದನ್ನು ಗುದ್ದಿ ಉರುಳಿಸಿದರು.

ಅಮ್ಮ ಸುಮ್ಮನಿರದೆ 'ಚೆಂಬು ಗುದ್ದಿ ಮೈಯೇಕೆ ನೋಯಿಸಿಕೊಳ್ತೀರಿ' ಎಂದರು. ಅಪ್ಪಾಜಿ 'ಹೂಂ' ಎಂದು 'ಹೂಂಕರಿಸಿ' ಸ್ನಾನಕ್ಕಿಳಿದರು. ಅಪ್ಪಾಜಿಗೆ ಕೋಪ ಬಂದಾಗ ಅಮ್ಮ ಹುಡುಗರ ಮೇಲೆ ಹಾರಿಬೀಳ್ತಾಳೆ. ಹುಡುಗರು 'ಹಾಂ ಹೂಂ' ಎಂದರೆ 'ದಪದಪ' ಚೆಚ್ಚುತ್ತಾಳೆ.

ಅಪ್ಪಾಜಿ ಆತುರಾತುರವಾಗಿ ಸ್ನಾನಗೃಹವನ್ನು ಪ್ರವೇಶಿಸಿ ಕಾಲು ಜಾರಿ ನಿಮಿಷಾರ್ಧದಲ್ಲಿ ಹಾಸುಗಲ್ಲಿನ ಮೇಲಿದ್ದ ನೀರಿನ ಮೇಲೆ ಅಂಗತ್ತನಾಗಿ ಮಲಗಿದರು. ಇಡೀ ಭಾರವನ್ನು ಮೊಣಕೈ ಹೊತ್ತು ನಿಂತು ಮೂತಿ ನೀರಾಗುವುದನ್ನು ತಪ್ಪಿಸಿತು. ಮೊಣಕೈ ತರಚಿದರೂ ದವಡೆ ಮುರಿಯಲಿಲ್ಲವೆಲ್ಲಾ! ತರಚಿದ ಭಾಗಕ್ಕೆ ಅಲ್ಲೆ ಇದ್ದ ಟಿಂಚರ್ ಹಚ್ಚಿಕೊಂಡು 'ಉರಿ ಉರಿ' ಎಂದು ಉಸಿರು ಬಿಡುತ್ತಿದ್ದರು. ದೇಹ ಬಚ್ಚಲಿನ ಕೊಳಚೆಯಲ್ಲಿ ಬಿದ್ದಿದ್ದರಿಂದ ಮತ್ತೆ ಸ್ನಾನವಾಗಬೇಕಾಯಿತು. ಈಸಾರಿ ಗಾಯಕ್ಕೆ ನೀರು ಬೀಳದಿರಲೆಂದು ಮೊಣಕೈಯನ್ನು ಹಸುವಿನ ಕೊಂಬಿನಂತೆ ಮೇಲಕ್ಕೆತ್ತಿಕೊಂಡು ಅಮ್ಮನ ಕೈಲಿ ನೀರು ಹಾಕಿಸಿಕೊಂಡರು.

* * *

ಅಪ್ಪಾಜಿ ತಲೆ ಬಾಚಿಕೊಳ್ಳುತ್ತಿರುವಾಗ ಅಮ್ಮ ದಢಾರನೆ ಬಂದು ಅಪ್ಪಾಜಿಯ ತಲೆ ಮೂಸಿ ನೋಡಿದಳು. 'ಅಯ್ಯೋ ನಿಮಗೇನು ಹಿಡಿದಿದೆ .. ಸೀಮೆಯೆಣ್ಣೆ ಸವರಿಕೊಳ್ಳೋಕೇ'—ಎಂದು ಗಾಬರಿಯಾದಳು.

ಅಪ್ಪಾಜಿಯ ತಲೆಗೂದಲಿನಲ್ಲಿ ತರ್ಜನಿಯನ್ನಾಡಿಸಿ ಅಮ್ಮ ಮೂಸಿ ನೋಡಿ "ಲಾಟೀನಿನ ಬತ್ತಿಯನ್ನು ಮೂಸಿನೋಡಿದಂತಿದೆ. ಅಡಿಗೇ ಮನೆಗೆ ಈ ವಾಸನೆ ಬರ್‍ತಾ ಇತ್ತು...." ಎಂದಳು.

"ನಾನು ಹುಟ್ಟಿದಾಗಿನಿಂದ ಬಡ್ಕೋತಿದೀನಿ ಈ ಹಳೇ ತೈಲದ ಸೀಸೆ ಯಲ್ಲಿ ಸೀಮೆಯೆಣ್ಣೆ ತರಿಸೋದು ಬೇಡಾ ಅಂತ. ನನ್ನ ಮಾತೆಲ್ಲಿ ಕೇಳ್ತೀ.... ಸಾಲದ್ದಕ್ಕೆ ಇದು ಕೆಂಪು ಸೀಮೆಯೆಣ್ಣೆ ಬೇರೆ....ಗೊತ್ತೇ ಆಗೊಲ್ಲ ! "

"ಅಷ್ಟು ಗೊತ್ತಾಗೊಲ್ವೇ....ವಾಸನೆ...."

ಅಪ್ಪಾಜಿಗೆ ವಾಸನೆಯೊಂದು ಮಾತ್ರ ಗೊತ್ತಾಗೊಲ್ಲ. ಸಂತತವಾದ ಜ್ಞಾನಚೂರ್ಣದ ಸೇವನೆಯಿಂದ ಮೂಗು ಮದೋದಕವಿಲ್ಲದ ಆನೆಯ ಗಂಡ ಸ್ಥಲದಂತೆ ಸತ್ವವಿಲ್ಲದೆ ಸಪ್ಪೆಯಾಗಿದೆ.

"ಹೂಂ....ಗೊತ್ತಾಗುತ್ತೆ. ಹೇಳಬೇಡ್ವೆ...." ಎಂದರು ಅಪ್ಪಾಜಿ.

"ನೀವು ಕೇಳಬೇಡ್ವೇ...." ಎಂದಳು ಅಮ್ಮ.

ಮಾತಿನಲ್ಲಿ ಸೋತ ಅಪ್ಪಾಜಿಗೆ ಮೂಗಿಗೆ ನಶ್ಯಕ್ಕೆ ಬದಲು ಮೆಣಸಿನ ಪುಡಿಯೇರಿಸಿಕೊಂಡಂತೆ ರೇಗಿತು. ಏಟು ತಿಂದ 'ಬಾಕ್ಸರ್'ನಂತೆ ಕಿಡಿಕಿಡಿ ಯಾಗಿ ಬುಸುಗಾಡಿದರು. ಮತ್ತೆ ತಲೆ ತೊಳೆದುಕೊಳ್ಳಬೇಕಾಯಿತು ಅಪ್ಪಾಜಿ. "ಇವತ್ತೂ ಇಷ್ಟೊಂದು ಗಡಿಬಿಡಿಯೇ........ಇನ್ನು ಮೇಲಾದರೂ ನಿಧಾನ ನಿಲುಕಡೆ ಕಲಿಯಿರಿ"—ಎಂದು ಅಮ್ಮ ಹೇಳೇಬಿಟ್ಟಳು.

"ಈಗೇನಾಯಿತು ...ನಿನಗೆ, ಮಹಾ ಹೇಳೋಕೆ ಬಂದಳು ಪ್ರವೀಣೆ ಯಂತೆ....ನಿಧಾನವಂತೆ....ನಿಲುಕಡೆಯಂತೆ...."

—ಎಂದು ಒಳಧ್ವನಿಯಲ್ಲಿ ಕೇಳಿಯೂ ಕೇಳದಂತೆ ಹೇಳಿಕೊಳುತ್ತ ಹೊರಗೆ ಹೋದರು ಅಪ್ಪಾಜಿ.

* * *

ಅಪ್ಪಾಜಿ ಹತ್ತು ಗಂಟೆಗೆ ಸರಿಯಾಗಿ ಹೊರಹೊರಟರು. ಅಮ್ಮ ಬೇಗ ಬೇಗ ತಲೆಬಾಗಿಲಿಗೆ ಬಂದು:

"ಅಲ್ರೀ, ಎಲ್ಲಿಗೆ ಹೋಗ್ತೀರಿ ? "—ಎಂದು ಕೇಳಿದಳು.

"ಏ ಪಿಶಾಚಿ....ಮೂವತ್ತು ವರ್ಷ ಮುಂಡೀ ಕೆಳಗೆ ಹಾಕ್ಕೊಂಡಿದ್ದಿ. ಎಲ್ಲಾದರೂ ಹೊರಟು ನಿಂತಾಗ 'ಎಲ್ಲಿಗೆ ಹೋಗ್ತೀರಿ' ಅಂತಿ. ಎಲ್ಲಿಗೆ ಹೋಗ್ತಾರೆ. ಆಫೀಸಿಗಲ್ಲದೆ...."

"ಅಲ್ರಿ. ..ಆಫೀಸಿಲ್ಲ...."

"ಆಫೀಸೇಕಿಲ್ಲ ಇವತ್ತು. ಯಾವ ಚಕ್ರವರ್ತಿ ಸತ್ತ. ಯಾವ ರಾಜ ಘಟ ಒಗೆದ. ಯಾವ ರಾಜಕಾರಣಿ ಕಾಲವಾದ. ಯಾವ ಮುತ್ಸದ್ದಿ ಮರಣ ಹೊಂದಿದ "

"ನಿನ್ನೆ ಸಂಜೆ ನೀವೇ. " ಎಂದು ಅಮ್ಮ ಹೇಳುತ್ತಿದ್ದರೂ ಅವಳ ಮಾತನ್ನು ಕೇಳದೆ ಅಪ್ಪಾಜಿ ಒಂದೇ ಉಸುರಿಗೆ ಹೊಸಲು ದಾಟಿ ನಡುರಸ್ತೆಗೆ ನೆಗೆದು, ಮುಖ ಮೂಗು ಉದ್ದ ಮಾಡಿಕೊಂಡು ಬೆದರಿದ ಹುಂಜದಂತೆ ರಸ್ತೆ ಯಲ್ಲಿ ಕುಪ್ಪಳಿಸಿಕೊಂಡು ಹೋದರು.

ಇವರಿಗೇನು ಹುಚ್ಚೋ ಬೆಪ್ಪೋ? ಎಂದು ಅಮ್ಮ ಅಂದುಕೊಂಡು ಅಡಿಗೆ ಮನೆಯೊಳಕ್ಕೆ ತಾನು ಬಿಟ್ಟುಬಂದ ಕೆಲಸವನ್ನು ಮುಗಿಸಲು ಹೋದಳು. "ಇನ್ನೂ ಊಟ ಮಾಡಿಲ್ಲ. ಊಟ ಎಲ್ಲಿಗೆ ಕಳಿಸೋದು ಏನು ಕತೆ...." ಎಂದು ಪೇಚಾಡಿದಳು ಅಮ್ಮ.

* *

ಅಪ್ಪಾಜಿ ದಿನವೂ ಹೋಗುತ್ತಿದ್ದ ರಸ್ತೆಯಲ್ಲೇ ಹೊರಟರು. ಪ್ರತಿ ದಿನವೂ ಅಪ್ಪಾಜಿ ಮನೆಯನ್ನು ಬಿಟ್ಟೊಡನೆ ಸೌದೆ ಡಿಪೋಗೆ ಜನರು ಮುತ್ತು ವಂತೆ ಅವರನ್ನು ಮುತ್ತುತ್ತಿದ್ದರು. ವಿವಿಧ ರಂಗುವಸ್ತ್ರಗಳಿಂದಲಂಕೃತವಾ ದವರು ಹ್ಯಾಟು, ಸಿಂಬೆ, ಗಾಂಧಿಟೋಪಿ, ಸಾದಾಟೋಪಿ, ಮಕಮಲ್ಲುಟೋಪಿ, ಜರೀ ರುಮಾಲು....ಇತ್ಯಾದಿಗಳನ್ನು ಧ ರಿ ಸಿ ದ ವ ರು ಅಪ್ಪಾಜಿಯನ್ನು ಕಂಡೊಡನೆ ಹಲ್ಲು ಕಿರಿದು ನಮಸ್ಕರಿಸುತ್ತಿದ್ದರು. ಅಪ್ಪಾಜಿ ಕೊಡೆಯ ಹಿಡಿ ಯನ್ನು ಮೂಗಿಗೆ ತಗುಲಿಸಿಕೊಂಡು ಪ್ರತಿವಂದಿಸುತ್ತಿದ್ದರು. ಮನೆಯ ಹತ್ತಿರ ಬನ್ನಿ ಮಾತೋಡೋಣ ನಿಧಾನವಾಗಿ....ಎಂದು ಹೇಳಿ ಮುಂದು ವರಿಯುತ್ತಿದ್ದರು.

ಮತ್ತೆ ಕೆಲವರು, ಸ್ವಾಮಿ ನನ್ನದೇನಾಯಿತು, ನನ್ನ ಮಗನದೇನು ಮಾಡಿದಿರಿ. ನನ್ನ ಅಳಿಯನಿಗೆ ಗತಿಗಾಣಿಸಿದಿರಾ; ನಿಮ್ಮ ಕೈಲೇ ನನ್ನ ಉದ್ಧಾರವಾಗಬೇಕು. ನಮ್ಮ ಮನೇಲಿ ನಿಮ್ಮ ದೀಪ ಹಚ್ತೇವಿ....ನಾನು ಮಕ್ಕಳು ಮರಿಯೊಂದಿಗ. .ಈ ರೀತಿ ಗೋಳ್ಗರೆಯುತ್ತ ಅಪ್ಪಾಜಿಯ ಹಿಂದಡಿ ಯಿಡುತ್ತಿದ್ದರು. ಅಪ್ಪಾಜಿ ಈ ಅಧಿಕಾರ ಕ್ಷೇತ್ರಕ್ಕೆ ಏರಿದಾಗಿನಿಂದಲೂ ಅಪೇಕ್ಷ ಕರು, ಆಕ್ಷೇಪಕರು, ಉಪೇಕ್ಷಕರು, ಪ್ರೇಕ್ಷಕರು... ಎಲ್ಲರೂ ಬಗ್ಗಿನಿಂತು ಕಾಡಿ, ಬೇಡುತ್ತಿದ್ದರು. ಅಪ್ಪಾಜಿ ಎತ್ತ ತಿರುಗಿದರೂ ಚಾಚಿದ ಕೈಗಳು, ಆಲಿಸಿದ ಕಿವಿ, ಓರೆಯಾದ ಮಂಡಿ, ಬಗ್ಗಿದ ಸೊಂಟ, ಬಾಡಿದ ಮೀಸೆ, ದೀನ ಮೋರೆಗಳು, ಒಣ ತುಟಿಗಳು, ಕಣ್ಣಿಗೆ ಬೀಳುತ್ತಿದ್ದವು. ಈ ಗದ್ದಲದೊಂದಿಗೆ ನಡೆದು ನಡೆದು ಅಪ್ಪಾಜಿಗೆ ರೂಢಿಯಾಗಿತ್ತು.

ಆದರೆ ಈ ದಿನ ಒಂದು ನರಪಿಳ್ಳೆಯೂ ಇಲ್ಲ. ಈ ದಿನಚರಿಯಲ್ಲಿ ವ್ಯತ್ಯಾಸವಾದುದು ಅಪ್ಪಾಜಿಯ ಮನಸ್ಸಿನಮೇಲೂ ಪರಿಣಾಮವನ್ನುಂಟು ಮಾಡದಿರಲಿಲ್ಲ. ಮನೆಯಿಂದ ಹೊರಡುವಾಗಲೇ ಜಗಳ ಕಾದಿದ್ದ ಅಪ್ಪಾಜಿ ನೀರಿನಿಂದ ಹೊರಬಿದ್ದ ಮೀನಾದರು.

'ಆ ಶ್ರೀಕಂಠಯ್ಯನಾದರೂ ಬರಬೇಕಾಗಿತ್ತೆಲ್ಲ!' ಅಂದುಕೊಂಡರು.

ಶ್ರೀಕಂಠಯ್ಯನದು ಮಾಗಡಿ ರೋಡಿನಲ್ಲಿ ಮನೆಯಾದರೂ ಹತ್ತು ಗಂಟೆಗೆ ಆತ ನಮ್ಮ ಮನೆಗೆ ಬಂದು ಅಪ್ಪಾಜಿಯನ್ನು ಸಹಬಾಲಿಸು (ಹಿಂಬಾ ಲಿಸು ಅನ್ನುವಂತೆ)ತ್ತಿದ್ದ....ಅವನು ಬಂದಕೂಡಲೆ ಅಪ್ಪಾಜಿಗೆ 'ಅವರು ಹೀಗಂದ್ರು. ..ಇವರು ಹಾಗಂದ್ರು... ಆ ಹೆಡ್ ಕ್ಲಾರ್ಕ್ ನಿಮ್ಮನ್ನು ಕಂಡ್ರೆ ಮೇಲ್ಕೀಲೆ ಹಾಗಿದ್ದಾನೆ. ಒಳಗೆ ಕತ್ತರಿ ಹಾಕಬೇಕಂತ ಕಾದಿದಾನೆ'. . ಇತ್ಯಾದಿ ಅಪ್ಪಾಜಿಯನ್ನುಳಿದು ಮತ್ತೆಲ್ಲರ ಮೇಲೂ ಚಾಡಿ ಹೇಳಿಕೊಂಡು ನಡೆಯುತ್ತಿದ್ದ. ಅವನೂ ಈ ದಿನ ಬಂದಿಲ್ಲವಾದ್ದರಿಂದ ಅಪ್ಪಾಜಿ ತೋಳ ಸಂದಿಯಲ್ಲಿ ಕೊಡೆ ಸಿಕ್ಕಿಸಿಕೊಂಡು ದಿಕ್ಕುಗಾಣದೆ ನಡೆಯಬೇಕಾಯಿತು.

ಮುಂದೆ, . ದಾರಿಯಲ್ಲಿ ಕಂಡೊಡನೆ 'ಶಿರಸಾಷ್ಟಾಂಗ' ಮಾಡುತ್ತಿದ್ದ ಚುರುಕ್‌ಚಂದ್ ತಪಶೀಲ್‌ಮಲ್ ಸಹ ಈ ದಿನ ಅಪ್ಪಾಜಿಯನ್ನು ಕಂಡೂ ಕಾಣದಂತೆ ತಪ್ಪಿಸಿಕೊಂಡು ನಡೆದ. ತನ್ನ ಮುಂದೆ ಗೂನು ಬೆನ್ನಾಗಿ ನಡೆಯು ತ್ತಿದ್ದ ಧಾರಾಳಯ್ಯ ಸೊಂಟವನ್ನು ಧಾರಾಳವಾಗಿ ಎತ್ತಿಕೊಂಡೇ ಹಾಯ್ದು

ನಡೆದ. ಅಪ್ಪಾಜಿಗೆ ಕೋಪ ಬಂದಿತು. 'ಇಷ್ಟು ಬೇಗ ಇವರಿಗೆ ಅಹಂಕಾರ ಬಂದಿತೆ? ಇರಲಿ ಇರಲಿ....' ಎಂದು ತುಟಿ ಕಚ್ಚಿಕೊಂಡು ನಡೆದರು.

* * *

ಎಂದಿನಂತೆ ಹನ್ನೊಂದು ಘಂಟೆ ಹೊಡೆದಾಗ ಅಪ್ಪಾಜಿ ಕಛೇರಿಯ ಹೊಸಲಿಗೆ ಬೂಟ್ಸು ತಗುಲಿಸಿದರು. ಜವಾನ ಎಂದಿನಂತೆ ಬಗ್ಗಿ ಓಡಿಬಂದು ನಮಸ್ಕರಿಸಿ ಕೈಚೀಲ ಕಿತ್ತುಕೊಳ್ಳಲಿಲ್ಲ. ನಿಂತಲ್ಲೇ ನಿಂತಿದ್ದ.

'ಈ ಗೂಬೆಗೇನು ಬಂತು . ಇವತ್ತು' ಅಂದುಕೊಂಡು ಕೈಚೀಲದೊಂದಿಗೆ ಕಛೇರಿಯೊಳಹೊಕ್ಕರು. ಒಂದುಬಾರಿ ಕೆಮ್ಮಿದರು. ಈ ರೀತಿ ಕೆಮ್ಮಿದಾಗ ಗುಂಪುಗೂಡಿದ್ದ ಗುಮಾಸ್ತರೂ, ಜವಾನರೂ ತಮ್ಮ ಸ್ವಸ್ಥಾನಗಳಿಗೆ ಮರಳಿ ಅಪ್ಪಾಜಿಗೆ ನಮಸ್ಕಾರದ ಪರಾಕು ಹೇಳುತ್ತಿದ್ದರು. ಹರಟೆಯ ಗಡಿಬಿಡಿಯಲ್ಲಿ ತೇಲಿ ಮುಳುಗಿದ್ದ ಕಛೇರಿ ಅಪ್ಪಾಜಿ ಕೆಮ್ಮಿದ ಕಾಲು ಗಂಟೆಯೊಳಗಾಗಿ ಅಚ್ಚೊತ್ತುವ ಯಂತ್ರಗಳ ಚಟಚಟ, ಲೇಖನಿಗಳ ಕೊರಕೊರ, ಗಂಟೆಗಳ ಟಣಟಣ ಶಬ್ದಗಳಿಂದ ತಾಳಬದ್ಧವಾಗಿ ನಡೆಯುತ್ತಿತ್ತು.

ಆದರೆ ? ಈ ದಿನ ಅಪ್ಪಾಜಿ ಕೆಮ್ಮಿದಾಗ ಗುಮಾಸ್ತ ಜವಾನರಾದಿಯಾಗಿ ಯಾರೂ ಕದಲಲಿಲ್ಲ. ತಲೆ ತಗ್ಗಿಸಲಿಲ್ಲ. ತುಟಿಪಿಟ್ಟೆನ್ನಲಿಲ್ಲ. ಹೆಡ್‌ಕ್ಲಾರ್ಕ್ ಕಿತಾಪತಯ್ಯ ಇನ್ನೂ ಬಂದೇ ಇರಲಿಲ್ಲ. ಅಪ್ಪಾಜಿ ಮೂರು ನಾಲ್ಕು ಬಾರಿ ಕೆಮ್ಮಿನ ಪುನರುಚ್ಚಾರಣೆ ಮಾಡಿದರೂ ಪ್ರಯೋಜನವಾಗಲಿಲ್ಲ. ಅಪ್ಪಾಜಿಗೆ ಕೋಪ ಬಂದಿತು. ಆದರೆ ತಲೆಗೆ ಬಂದ ಕೋಪವನ್ನು ಬಾಯಿಗೆ ತಂದುಕೊಳ್ಳದೆ ತಡೆದು, ತಮ್ಮ ಕೋಣೆಯ ಕದದ ರೆಕ್ಕೆಗಳನ್ನು ಭುಜದಿಂದ ದಬ್ಬಿಕೊಂಡು ತಮ್ಮ ಖಚಿತಾಸನದ ಕಡೆಗೆ ಕಾಲಿಟ್ಟು ಆಸನಾರೂಢರಾದರು.

ತಮ್ಮ ಮೇಜಿನ 'ಡ್ರಾಯರಿನ' ಬೀಗವನ್ನು ತೆಗೆಯುವ ಸಲುವಾಗಿ ತಮ್ಮ ಪ್ರಣಾಳದ ಷರಾಯಿಗೆ ಕೈತೂರಿಸಿದರು. ಬರೀ ಕೈ ಮೇಲಕ್ಕೆ ಬಂದಿತು. ಶರಟಿನ ಜೇಬಿನಲ್ಲೂ ತಡಕಿದರು. ಅಪ್ಪಾಜಿ ಗಾಬರಿಗೊಂಡು ಎದ್ದು ನಿಂತು ಜೇಬುಗಳನ್ನೂ ಒಂದುಕಡೆಯಿಂದ ಶೋಧಿಸಿದರು. ಆದರೂ ಪತ್ತೆಯಿಲ್ಲ.

ಎಂದೂ ಇಲ್ಲದವನು ಇಂದು ಬೀಗದಕ್ಕೆ ಮರೆತು ಬಂದಿದ್ದೇನೆ ಎಂದು ಅಪ್ಪಾಜಿ ಬಹಳ ಪೇಚಾಡಿಕೊಂಡರು. ಅಮ್ಮನೂ ಜ್ಞಾಪಿಸಲಿಲ್ಲವೆಂದು ರೇಗಿದರು. ಕಾಲಿಂಗ್ ಬೆಲ್ ಒತ್ತಿದರು, ಕಿವಿ ತೂತಾಗುವ ವರೆಗೂ. ಯಾರೂ

ಬರಲಿಲ್ಲ. ತಾವೇ ಎದ್ದು ಹೊರಗೆ ತಲೆಹಾಕಿ ನೋಡಿ ಬಾಗಿಲ ಮುಂದಿನ ಸ್ಟೂಲಿನ ಬುಡದಲ್ಲಿ ಕುಳಿತು ಎರಡು ಮಂಡಿಯ ಮೇಲೆ ತಲೆಯೂರಿ ಮಲಗಿದ್ದ ಜವಾನನನ್ನು ಎಬ್ಬಿಸಿದರು. ಜವಾನನು ಎದ್ದ ಕೂಡಲೆ ಹಿಂದೆ ಮುಂದೆ ನೋಡದೆ, "ನಿಮ್ಮ ವಿಜಿಟಿಂಗ್ ಕಾರ್ಡ್ ಕೊಡಿ ಇಲ್ಲಿ. ಆ ಬೆಂಚಿನ ಮೇಲೆ ಕೂತ್ಕೊಳ್ಳಿ... ಕರೆದಾಗ ಬನ್ನಿ....ಸಾಹೇಬ್ರಿನ್ನೂ ಬಂದಿಲ್ಲ" ಎಂದು ಹೇಳಿ ಮತ್ತೆ ನಿದ್ರಾಸನ ಹಾಕಿದ.

ಮತ್ತೊಂದು ಸಾರಿ ಅರಚಿ ಅವನನ್ನು ಎಬ್ಬಿಸಬೇಕಾಯಿತು ಅಪ್ಪಾಜಿ.

"ಬೇಗ ಮನೆಗೆ ಹೋಗಿ ಅಮ್ಮಾವ್ರ ಹತ್ತಿರ ಕೇಳಿ ಬೀಗದ ಕೈ ತೆಗೆದು ಕೊಂಡು ಬಾ ಹೋಗು.... ಹೂಂ. . ಬೇಗ ಓಡು" ಎಂದರು.

ನಿಂಗನೂ ಅವನ ಜೊತೆಯಾಳುಗಳೂ ನಕ್ಕರು. ಗುಮಾಸ್ತರೂ ಅವರೊಂದಿಗೆ ಸೇರಿಕೊಂಡು ಹಾಸ್ಯಮಾಡಿದರು. ಅಪ್ಪಾಜಿಗೆ ಕಣ್ಣು ಕೆಂಪಾಯಿತು. ಅವರು ನಿಂತಲ್ಲಿಯೇ ಕುಣಿದಾಡಿದರು.

"ಹೋಗ್ತೀಯೋ ಇಲ್ವೊ.... ಇಲ್ಲ ಸರ್ವಿಸ್ ಬುಕ್ಕಿನಲ್ಲಿ ಬರೀತೀನಿ.... ಶುದ್ಧನಾಲಾಯಕ್ಕು, ಅವಿಧೇಯರು, ಗೂಬೆಗಳು...."

ಅಪ್ಪಾಜಿ ಸರ್ವೀಸ್ ಬುಕ್‌ಗಾಗಿ ಹುಡುಕಾಡಿದರು, ಅದೂ ಬೀರಿನಲ್ಲಿತ್ತು. ಬೀಗದ ಕೈ ಇರಲಿಲ್ಲ. ಅಪ್ಪಾಜಿ ನಿರಾಶರಾದರು.

ಅಪ್ಪಾಜಿಯನ್ನುಳಿದು ಎಲ್ಲರೂ ನಕ್ಕರು. ಆ ನಗು ಅಪ್ಪಾಜಿಯನ್ನು ಅವಮಾನದ ಪಾತಾಳಕ್ಕಿಳಿಸಿತು. ಕೋಪ ಶಿಖರವನ್ನೇರಿತು. ಅಲ್ಲಿಯೇ ಬಿದ್ದಿದ್ದ ಒಂದು ಕಾಗದವನ್ನು ತೆಗೆದುಕೊಂಡು ಕಪ್ಪುಶಾಯಿಯ ಲೇಖನಿಯನ್ನು ಮರೆತು ಕೆಂಪು ಶಾಯಿಯೊಳಕ್ಕೆ ಅದ್ದಿ ಆ ಬೆರಿಕೆ ಮಸಿಯೊಳಗೆ ಗೀಚಿದರು. ಎಲ್ಲರಿಗೂ 'ಫೈನ್' ಹಾಕಿರುವುದಾಗಿ 'ಮೆಮೊ' ಓದಿ ಹೇಳಿದರು.

ಇದರಿಂದಲೂ ಯಾರೂ ಗಾಬರಿಗೊಳ್ಳದೆ ನಿರ್ಭೀತರಾಗಿದ್ದರು. ಮುಂದೇನಾಗುವುದೋ ಎಂದು ನೋಡುವುದರಲ್ಲಿ ಕುತೂಹಲರಾಗಿದ್ದರು.

ಅಷ್ಟರಲ್ಲಿ ಹೆಡ್‌ಕ್ಲಾರ್ಕ್ ಕಿತಾಪತಯ್ಯನವರೂ ಅವರ ಸಂಗಡ ಧೂಮಸೇನರಾಯರೂ, ಅವರ ಬಾಲದಂತೆ ಶ್ರೀಕಂಠಯ್ಯನೂ ತಲೆಹಾಕಿದರು.

ಧೂಮಸೇನರಾಯರ ಮುಖ ಕಂಡ ಕೂಡಲೆ ಗುಮಾಸ್ತರೂ ಜವಾನರೂ ಗಂಡು ಹುಡುಗರನ್ನು ಕಂಡ ಹೆಣ್ಣುಹುಡುಗಿಯರಂತೆ ಚೆಲ್ಲಾಪಿಲ್ಲಿಯಾಗಿ

ಚದುರಿ ಯೋಗ್ಯಾಸನಗಳನ್ನು ಏರಿದರು. ಜವಾನರಲ್ಲೊಬ್ಬ ಘೂಮಸೇನರಾಯರ ಕೈಚೀಲ ತೆಗೆದುಕೊಂಡ. ಇದೆಲ್ಲವನ್ನು ಅಪ್ಪಾಜಿ ಗಮನಿಸಿದರು. 'ನಾನು ಕಛೇರಿಯ ಮುಖ್ಯಾಧಿಕಾರಿ.' ನನಗಿಲ್ಲದ ಮರ್ಯಾದೆ ನನ್ನ ಕೈಕೆಳಗಿನ ಅಧಿಕಾರಿಗೆ....ಎಂದು ಮನಸ್ಸಿನಲ್ಲಿಯೆ ಗೊಣಗಿಕೊಂಡರು.

"ಏನ್ರಿ ಕಿತಾಪತಯ್ಯ ಗಂಟೆ ಹನ್ನೊಂದೂವರೆಯಾಗಿದೆ. ಎಷ್ಟುದಿನ ಹೇಳೋದ್ರಿ....ಒಂದು ಸಾರಿ ಬರೇಹಾಕಿದ್ರೆ ಗೊತ್ತಾಗುತ್ತೆ. ಪಾಪ! ಏನೋ ಮಡದಿಯೊಂದಿಗ, ಮಕ್ಕಳೊಂದಿಗ ಅಂತ ಸುಮ್ಮನಿದ್ದರೆ...." ಅಪ್ಪಾಜಿ ರೇಗಿದರು.

ಆದರೆ ಕಿತಾಪತಯ್ಯ ತನ್ನ ಸಹಜರೀತಿಯಲ್ಲಿ ಪೇಟವನ್ನು ಸರಿಪಡಿಸಿ ಕನ್ನಡಕವನ್ನು ಕದಲಿಸಿಕೊಂಡು ಮೇಜಿನ ಬಲಗಡೆ ನಿಂತು ನಾಲಿಗೆಯಿಂದ ತುಟಿ ಸವರಿಕೊಳ್ಳುತ್ತ ದೇವರ ಮುಂದಿನ ಪೂಜಾರಿಯಂತೆ ಬಗ್ಗಿ ಕೈಕೈ ಹಿಸುಕಿಕೊಂಡು ಹಲ್ಲು ಕಿರಿಯುತ್ತ 'ದಯವಿಟ್ಟು' ಎಂದು ಕ್ಷಮಾಪಣೆ ಕೇಳಲಿಲ್ಲ!

"ಇವೆಲ್ಲ ಹೇಳಲು ನಿಮಗೆ ಅಧಿಕಾರವಿಲ್ಲ"–ಎಂದುಬಿಟ್ಟ ಕಿತಾಪತಯ್ಯ.

ಅಪ್ಪಾಜಿಗೆ ಕೊಂಚ ಸಂದೇಹವಾಯಿತು. 'ಇದೇನು ಈ ದಿನ ಎಲ್ಲಾ ಕಡೆಗೂ ಇದೇ ರೀತಿಯಾಗ್ತಾ ಇದೆ'—ಎಂದು ತಮ್ಮಷ್ಟಕ್ಕೆ ತಾವೇ ಹೇಳಿಕೊಂಡರು. ಮನೆಯಲ್ಲಿ ನೋಡಿದರೆ ಹಾಗಾಯಿತು. ಕಛೇರಿಯಲ್ಲಿ ನೋಡಿದರೆ ಹೀಗಾಯಿತು.

'ಈ ಕಛೇರಿ ಕದೀಮರಿಗೇನು ಬಂತು, ಈ ದಿನ. ಎಲ್ಲರೂ ಒಟ್ಟಾಗಿ ಸೇರಿ ಮುಷ್ಕರವೇನಾದರೂ ಹೂಡಿದ್ದಾರೊ....ಈಗಿನ ಕಾಲದಲ್ಲೇನು ಮಾತ್ರೆತ್ತಿದರೆ ಮುಷ್ಕರ.... ಗುಮಾಸ್ತರು ಲಂಚನಿವಾರಣಾ ಸಮಿತಿಯನ್ನು ನಿರ್ಮೂಲನಗೊಳಿಸಬೇಕೆಂದು ಮುಷ್ಕರ, ವಿದ್ಯಾರ್ಥಿಗಳು ಪರೀಕ್ಷೆ ಬೇಡವೆಂದು ಮುಷ್ಕರ; ಶ್ರೀಮಂತ ಮಹಿಳೆಯರು ವಜ್ರದ ಮೂಗುಬಟ್ಟು ಇಡಬಾರದೆಂದು ಬಡ ಹೆಂಗಸರ ಮುಷ್ಕರ, ಸೂಳೆಯರು ಅಲಂಕಾರ, ಟಾಯಿಲೆಟ್ ಉಪಯೋಗಿಸಿ ಗಂಡಸನ್ನಾಕರ್ಷಿಸಬಾರದೆಂದು ಗೃಹಿಣಿಯರ ಮುಷ್ಕರ, ಗೃಹಸ್ಥೆಯರು ಗೃಹದ ಹೊಸ್ತಿಲಲ್ಲಿ ನಿಲ್ಲಬಾರದೆಂದು ಸೂಳೆಯರ ಮುಷ್ಕರ, ಕೆಲಸ ಕಡಿಮೆ ಮಾಡಿ ಸಂಬಳ ಜಾಸ್ತಿ ಮಾಡಬೇಕೆಂದು ನೌಕರರ ಮುಷ್ಕರ, ಬುದ್ಧಿವಂತರು ಎಲ್ಲಾ

ಬುದ್ಧಿ ಉಪಯೋಗಿಸಬಾರದೆಂದು ದಡ್ಡರ ಮುಷ್ಕರ.... ಇತ್ಯಾದಿ ಪ್ರತಿಯೊಂದು ಕೋಣನ ಮುಂಜಿಗೂ ಮುಷ್ಕರ ಮಹಾಬಾಣವೆ! '

ಈ ಮುಷ್ಕರದ ಗಾಳಿ ತಮ್ಮ ಕಛೇರಿಗೆ ಬೀಸಿದೆಯೆಂದೇ ಅಪ್ಪಾಜಿ ತಿಳಿದರು, ತಡಬಡಾಯಿಸಿದರು. ಆದರೂ ತಮ್ಮ ಎದೆಗುಂದುತನವನ್ನು ಕಛೇರಿಯಲ್ಲೇ ತೋರ್ಪಡಿಸದೆ ಕರ್ತವ್ಯಾಭಿಮುಖರಾದರು. ಕಿತಾಪತಯ್ಯ ನವರನ್ನುದ್ದೇಶಿಸಿ, ಸಹಜವ್ಯಗ್ರತನದಿಂದಲೇ "ಎಲ್ಲಿ ಆ ಕೋತಿಲಾಲನ ಫೈಲು ತನ್ನಿ ... " ಎಂದರು.

ಅಪ್ಪಾಜಿಯ ಆಜ್ಞೆಯನ್ನು ಕಿತಾಪತಯ್ಯ ಗಮನಿಸದೆ ನಿಂತಿದ್ದುದಲ್ಲದೆ, ಧೂಮಸೇನರಾಯರನ್ನೇ ನೋಡುತ್ತ ಹುಬ್ಬಿನಲ್ಲಿ ಸನ್ನೆಮಾಡಿದ. ಅಪ್ಪಾಜಿ ಜೋರಾಗಿ ಕಿರಚಿದರು. ಒಂದು ಗಳಿಗೆ ಕಿತಾಪತಯ್ಯನೂ ಅಭ್ಯಾಸಬಲದಿಂದ ಹೆದರಿ ಫೈಲು ತರಲು ಹೋದ.

ಧೂಮಸೇನರಾಯ ಮಾತಾಡದೆ ಮುಂದೆ ಬಂದು ಜೇಬಿನಲ್ಲಿದ್ದ ಬೀಗದ ಕೈ ಗೊಂಚಲನ್ನು ತೆಗೆದರು. 'ಅಕ್ರೆ,' ನನ್ನ ಬೀಗದ ಕೈಗೊಂಚಲು ನಿಮಗೆ ಸಿಕ್ಕಿತೆ? ಎಲ್ಲಿ ಸಿಕ್ಕಿತು ? '—ಎಂದು ಪ್ರಶ್ನಿಸಿ, ಬೀಗದ ಕೈಗೊಂಚಲನ್ನು ತೆಗೆದುಕೊಂಡು 'ಥ್ಯಾಂಕ್ಸ್' ಅಂದರು.

ಧೂಮಸೇನರಾಯರು ಮೇಜನ್ನು ಗುದ್ದಿದರು. ಅದರ ರಭಸಕ್ಕೆ ಮೇಜಿನ ಮೇಲಿದ್ದ ಕಾಲಿಂಗ್ ಬೆಲ್, ಬ್ಲಾಟರ್ ಇತ್ಯಾದಿ ಸಾಮಗ್ರಿಗಳು ಕ್ಷಣಕಾಲ ಗಾಳಿಯಲ್ಲಿ ತೂರಾಡಿ ಕೆಳಗೆ ಬಿದ್ದುವು. ಅಪ್ಪಾಜಿ ಹರಿಯುವ ಶಾಯಿಯಿಂದ ತೋಳನ್ನು ರಕ್ಷಿಸಿಕೊಂಡು ಅದಕ್ಕೆ ಬ್ಲಾಟಿಂಗ್ ಅಣೆಕಟ್ಟೆದರು. ಧೂಮಸೇನರಾಯರ ಮುಖ ನೋಡಿದರು.

"ಈ ಬೀಗದ ಕೈ ಹೇಗೆ ಬಂತು ಅಂತ ಕೇಳ್ತೀರಾ? ನಿಮ್ಮ ಕ್ಲಾರ್ಕ್ ಕಿತಾಪತಯ್ಯ ಕೊಟ್ಟ. ನಿಮ್ಮಿಂದ ನಿನ್ನೆ ಸಂಜೆ ಅವನು ತೆಗೆದುಕೊಂಡ."

"ಛೇ.... ಛೆ. .."

"ನೀವು ಕೊಡಲಿಲ್ಲ. ಸರ್ಕಾರೀ ಆಜ್ಞೆ ಕೊಡಿಸಿತು" ಅಂದರು. ಹಾವಾಡಿಗನ ಸುತ್ತ ಜನ ಸೇರುವಂತೆ ಕಛೇರಿಯ ಆಸಾಮಿಗಳೆಲ್ಲ ಸಾಹೇಬರ ಕೋಣೆಗೇ ನುಗ್ಗಿದರು. ಅವರಲ್ಲೊಬ್ಬ ಆಸಾಮಿ, 'No admission' ಬೋರ್ಡನ್ನು ಹಸ್ತಗತ ಮಾಡಿಕೊಂಡೇ ಒಳನುಗ್ಗಿದ್ದ.

"ನಿನ್ನೆ ಸಂಜೆ ಸರ್ಕಾರದಿಂದ ಆರ್ಡರ್ ಬರುತ್ತಲೂ ಕಛೇರಿಯ ಕ್ಯಾಷ್ ಮತ್ತು ಕಾಗದ ಪತ್ರಗಳನ್ನು ಕಿತಾಪತಯ್ಯನಿಗೆ ಒಪ್ಪಿಸಲಿಲ್ಲವೆ. ಎಕ್ಸ್‌ಟೆನ್ ಷನ್ ಸಿಗುತ್ತದೆಯೆಂಬ ಭರವಸೆಯಿಂದ ಬಂದ ಆರ್ಡರನ್ನು ಹೊರಬಿಡದೆ ಎಂಟು ದಿನ ಇಟ್ಟುಕೊಂಡಿರಲಿಲ್ಲವೆ? ಅದಕ್ಕೊಂದು 'ಸ್ಟ್ರಿಕ್ಟ್' ರಿಮೈಂಡರ್ ಬರಲಿಲ್ಲವೆ?.... ವಿಧಿಯಿಲ್ಲದೆ 'ಚಾರ್ಜು ಹ್ಯಾಂಡೋವರ್' ಮಾಡಲಿಲ್ಲವೇ, ನಿನ್ನೆ. ಪುನಃ ಕಛೇರಿಗೆ ಬಂದು ದರ್ಬಾರ್ ಮಾಡ್ತಾ ಇದ್ದೀರಲ್ಲ. ನಿಮ್ಮ ಜೀಪಿನ ಪೆಟ್ರೋಲ್ ನಿನ್ನೆ ಸಂಜೆಗೇ ಸಮಾಪ್ತವಾಯಿತು." ಧೂಮುಸೇನ ರಾಯರು ಒಂದೇ ಉಸುರಿನಲ್ಲಿ ಎಲ್ಲವನ್ನೂ ಹೇಳಿದರು.

ಅಪ್ಪಾಜಿಗೆ ಆಗ ಹೊಳೆಯಿತು. ನಿನ್ನೆಯ ದಿನ ತಮಗೆ ರಿಟೈರ್ ಆಯಿತು ಎಂದು. ಅವರ ಜೀವ ಒಂದು ಹಿಡಿಯಾಯಿತು. ಹಾಳು ಜ್ಞಾಪಕ ಶಕ್ತಿ ಕಡೆಗೂ ಕೈಕೊಟ್ಟಿತ್ತು.

ಅಪ್ಪಾಜಿಗೆ ಆಗ ಹೊಳೆಯಿತು. ಶ್ರೀಕಂಠಯ್ಯ ಚಾಡಿ ಹೇಳಲು ಬರದಿದ್ದುದು, ಹೆಡ್‌ಕ್ಲಾರ್ಕ್ ಕಿತಾಪತಯ್ಯ ಅವಿಧೇಯನಾಗಿ ವರ್ತಿಸಿದ್ದು, ಚುರುಕ್‌ಚಂದ್ ಕಂಡೂ ಕಾಣದೆ ಹೋಗಿದ್ದು, ಜವಾನ ಬೀಗದ ಕೈ ತರಲು ಹೇಳಿದಾಗ ಕಲ್ಲಿನಂತೆ ನಿಂತಿದ್ದು, ಜವಾನರು, ಗುಮಾಸ್ತರು ತಮಗೆ ಸರಿಸಮ ನಿಂತು, ತಮ್ಮನ್ನು ಅಪಹಾಸ್ಯ ಮಾಡಿದ್ದು—ಎಲ್ಲದಕ್ಕೂ ಅವರು 'ರಿಟೈರ್' ಆದದ್ದೇ ಕಾರಣ.

ಧೂಮುಸೇನರಾಯನಿಗೆ ಜಾಗ ಕೊಟ್ಟು ಅಪ್ಪಾಜಿ ಹೊರಗೆ ಬಂದರು.

* * * *

ಅಪ್ಪಾಜಿ ಪುನಃ ಕಛೇರಿಗೆ ಬಂದದ್ದು ಅದೇತಾನೆ ಪ್ರವಾಸ ಬಂದಿದ್ದ ಮುಖ್ಯಾಧಿಕಾರಿಗಳಿಗೂ ತಿಳಿದು ಅವರು ಆ ಸ್ಥಳಕ್ಕೆ ಧಾವಿಸಿ ಬಂದರು. ಅಪ್ಪಾಜಿಯನ್ನು ನೋಡಿ 'ಏನ್ರಿ ರಾಯರೇ.... ಇಷ್ಟುದೂರ ಬಿಸಿಲಿನಲ್ಲಿ....' ಎಂದು ಪ್ರಶ್ನಿಸಿದರು.

'ಏನಿಲ್ಲ. ಏನಿಲ್ಲ' ಎಂದು ಅಪ್ಪಾಜಿ ಉಗುಳು ನುಂಗಿದರು.

"ನನಗೆ 'ರಿಟೈರ್' ಆಗಿದೆ ಎಂಬುದು ಮರೆತುಹೋಗಿತ್ತು. ಎಂದಿನಂತೆ ಆಫೀಸಿಗೆ ಬಂದುಬಿಟ್ಟಿದ್ದೆ."

"ನೋಡಿ, ರಾಯರೆ, ಈ ರೀತಿ ಮರೆವು ಬಂದಾಗಲೇ 'ರಿಟೈರ್' ಮಾಡಿಸುವುದು. ಈಗಲಾದ್ರೂ ನಿಮಗೆ ಗೊತ್ತಾಯಿತೊ...."

ಅಪ್ಪಾಜಿ ಮಾತನಾಡಲಿಲ್ಲ. ಅವರ ಜೊತೆಗೆ ಮಾತಾಡುತ್ತ ಮುಖ್ಯಾಧಿಕಾರಿಗಳು ಅವರನ್ನು ಕಛೇರಿಯಿಂದ ಹೊರಕ್ಕೆ ತಂದರು.

"ಹೋಗಿಬರ್ತೀರಾ. ಆಗಾಗ್ಗೆ ಬರ್‍ತಾ ಇರಿ. ಈಗೇನು ಬೇಕಾದಷ್ಟು ಬಿಡುವು ಇರುತ್ತದೆ...." ಎಂದು ಹೇಳಿದರು.

ಅಪ್ಪಾಜಿ ಕೋಪವನ್ನು ಗಂಟಲೊಳಗೇ ಅದುಮಿಕೊಂಡು ಹಲ್ಲು ಕಚ್ಚಿಕೊಂಡರು, ತುಟಿ ಕಡಿದುಕೊಂಡರು. ಸೋತ ಜೆಟ್ಟಿಯಂತೆ ಜೋಲುಮೋರೆ ಹಾಕಿಕೊಂಡು ಮನೆಯ ಕಡೆ ತಿರುಗಿದರು. ಗೇಟಿನ ಬಳಿಬಂದಾಗ ಅಪ್ಪಾಜಿ ಹಿಂತಿರುಗಿ ಕಛೇರಿಯನ್ನೊಮ್ಮೆ ನೋಡಿ ತಮ್ಮ ಗತವೈಭವವನ್ನು ನೆನಸಿಕೊಂಡರು. ತೌರುಮನೆಯಿಂದ ಹೊರಟ ಹೆಣ್ಣುಮಗಳಂತೆ ಕಣ್ಣೀರಿಟ್ಟರು. ದೀರ್ಘವಾದ ನಿಟ್ಟುಸಿರು ಬಿಟ್ಟರು.

ಅಮ್ಮ ಬೆಳಗ್ಗೇನೇ ಹೇಳ್ತಾ ಬಂದಳು, ಈ ದಿನವೂ ಗಡಿಬಿಡಿಯೇ ಅಂತ.... ಅಪ್ಪಾಜಿ ಕೇಳಲಿಲ್ಲ.

ಅದಕ್ಕೆ ಈ ಬೇಸ್ತು !

# ನಳಮಹಾತ್ಮೆ!

'ಇಲ್ನೋಡಿ....ಬಾಗಿಲು'

ಆಗತಾನೇ ಕಿಟಕಿಯಲ್ಲಿ ಮುಖವಿಟ್ಟು ಮುಗಿಲನ್ನು ನೋಡುತ್ತಿದ್ದಳು ಆ ಹುಡುಗಿ. ಅವಳಿಗೆ ನಾನು ಕೂಗಿದ್ದು ಕೇಳಿಸಲಿಲ್ಲ. ಅವಳ ಉದ್ದನೆಯ ಕೂದಲು ಗಾಳಿಗೆ ಚೆಲ್ಲಾಪಿಲ್ಲಿಯಾಗಿ ಹಳೆಯ ಕೊಡೆಯ ಚೂರು ಬಟ್ಟೆಯಂತೆ ಹಾರಾಡುತ್ತಿದ್ದುವು. ಅವಳ ಕಿವಿಯಲ್ಲಿ ಓಲೆಯಿರಲ್ಲ. ಬಹುಶಃ ಈಚೆಯೋ ಆಚೆಯೋ ಆಗಿ ನೀರು ಹಾಕಿಕೊಂಡಿದ್ದಳು ಅಂತ ಕಾಣುತ್ತೆ. ಆ ಮುಖವೂ ಅಷ್ಟೇ. ಮೇಕಪ್ ಇಲ್ಲದೆ, ನೀರಿನಲ್ಲಿ ತೊಳೆದ ಕೆಂಪು ಪೆಪ್ಪರುಮೆಂಟಿನಂತೆ ಮೆರಗುಹೀನವಾಗಿತ್ತು. ಮುಖವನ್ನು ಒಳಕ್ಕೆ ಎಳೆದುಕೊಂಡು ಅದೃಶ್ಯ ಳಾದಳಾಕೆ.

ಹೊರ ಬಾಗಿಲಿಗೆ ಹಬ್ಬಿಸಿದ್ದ ಜಾಜಿಯ ಗಿಡವಡಿಯಲ್ಲಿ ನಿಂತಿದ್ದೆ. 'ವಾಣೀವಿಲಾಸ' ಎಂದು ಮನೆಗೆ ಹಾಕಿದ್ದ ಅಮೃತಶಿಲೆಯ ಬೋರ್ಡು ನೋಡಿದೆ. ಅಪ್ಪಾಜಿ ಹೇಳಿದ ಮನೆಯೂ ಇದೇ ಎಂದು ಮತ್ತೆ ಧೈರ್ಯ ಮಾಡಿಕೊಂಡೆ. ಆ ಕಡೆಯಿಂದ ಈ ಕಡೆಗೆ ಓಡಾಡಿದೆ. ಬೂಟಿನಿಂದ ಗೇಟನ್ನು ಗುದ್ದಿದೆ. ಬೂಟಿಗೆ ಮೆತ್ತಿಕೊಂಡಿದ್ದ ಮಣ್ಣು ಉದುರಿತಷ್ಟೆ. ಆದರೆ ಯಾರೂ ಬರಲಿಲ್ಲ.

ಪುನಃ ಕೂಗಿದೆ. ಕಿಟಕಿಯಲ್ಲಿ ಮುಖ ತೋರಿಸಿ ಮಾಯವಾಗಿದ್ದ ಹುಡುಗಿ ಮತ್ತೆ ಹಜಾರಕ್ಕೆ ಬಂದು ಆ ಕಡೆ ನೋಡಿ ಒಳಕ್ಕೆ ಹೋದಳು. ನಾನು ಕೂಗಿದ್ದು ಕೇಳಿಸಲೇ ಇಲ್ಲ ಅವಳಿಗೆ. ಅವಳ ಹೆಸರಾದರೂ ಗೊತ್ತಿದ್ದರೆ ಹೆಸರು ಹಿಡಿದು ಕರೆಯಬಹುದಾಗಿತ್ತು. ಅಪ್ಪಾಜಿ ಅದನ್ನಾದರೂ ಹೇಳಿದ್ದರೆ.... ಅದೂ ನಿಜ....ಯಾವುದೊ ಹುಡುಗಿಯನ್ನು ಅದು ಹೇಗೆ ಹೆಸರು ಹಿಡಿದು ಕೂಗುವುದು. ಬರಿ 'ಮಿಸ್' ಎಂದು ಕೂಗೋಣವೇ ಎನ್ನಿಸಿತು. ಬೇಡ ಎನ್ನಿಸಿತು. ಷರಾಯಿ ಜೇಬಿನಿಂದ ಕರವಸ್ತ್ರದ ಕೊನೆಯನ್ನು ಹಿಡಿದು ಬಾಲಹಿಡಿದು ಇಲಿಯೆಳೆಯುವಂತೆ ಎಳೆದೆ. ಅಲ್ಲಾ .... ಹುಡುಗಿಯರು ಕೂಗಿದ ಕೂಡಲೇ

ಬರುತ್ತಾರೆ....ನೋಡಿದ ಕೂಡಲೆ ನಸುನಕ್ಕು, 'ಹಲೋ' ಎಂದ ಕೂಡಲೇ ಹಲ್ಲು ಕಿರಿಯುತ್ತಾರೆ ಎನ್ನುತ್ತಾರೆ ನನ್ನ ಗೆಳೆಯರು. ಆದರೆ ಇಲ್ಲಿ ನೋಡಿದ್ರೆ.... ನಾನೇ ಹಲ್ಲುಗಿರಿಯುತ್ತಿದ್ದೇನೆ. ನಾನು 'ಬೊಂಬ್ಡಾ' ಬಾರಿಸಿದರೂ ಯಾರೂ ಓ ಕೊಡಬಾರದೆ!

ಜೈಲು ಮುಂದಿನ ಸಿಪಾಯಿಯಂತೆ ಜಾಜಿ ಬಳ್ಳಿಯ ಆ ಕೊನೆಯಿಂದ ಈ ಕೊನೆಯವರೆಗೆ 'ಪಾರಾ' ತಿರುಗಿದೆ ಸ್ವಲ್ಪ ಹೊತ್ತು.

ಅದೇ ಹುಡುಗಿ ಹೊರಕ್ಕೆ ಬಂದು, 'ಬಂದಳು' ಅನ್ನುವುದರೊಳಗಾಗಿ ಒಳಕ್ಕೆ ಹೋದಳು. ನಾನು ಕೂಗಿದೆ. ಅವಳಿಗೆ ಕೇಳಿಸಿತೊ ಇಲ್ಲವೊ....

ಬೇಟೆಗಾರನ ಬಾಣಕ್ಕೆ ಸಿಕ್ಕ ಹರಿಣಿಯಂತೆ ನಿಂತಲ್ಲಿ ನಿಲ್ಲಳು. ಕುಳಿತಲ್ಲಿ ಕೂಡಳು ಆ ಹುಡುಗಿ. ಮತ್ತೆ ಕಿಟಕಿಯ ಹತ್ತಿರ ಅವಳು ನಿಂತಿದ್ದಾಗ ಅವಳು ಮುಖ ತೊಳೆದುಕೊಂಡಿದ್ದಂತಿತ್ತು. ಅರಳಿದ ಕೆಂಪು ಗುಲಾಬಿಯಂತೆ ಮುಖ, ಕಣ್ಣುಗಳ ಮಿಂಚು ಬೆಡಗು, ಕೆನ್ನೆಯಲ್ಲಿನ ಗುಳಿಗಳ ಮೋಹಕತೆ, ಮುಂಗುರುಳ ತಂಡ....ಬಳ್ಳಿಯಂತೆ ಬಾಗಿ ಬೀಗುವ ದೇಹಮಾಟ .... ದೂರದಿಂದ ನೋಡಿದ್ದಕ್ಕೆ ಅಷ್ಟು ಚೆನ್ನಾಗಿ ಕಾಣುವ ಈ ಚೆಲುವೆ ಹತ್ತಿರದಿಂದ ಇನ್ನೆಷ್ಟು ಚೆನ್ನಾಗಿರಬಹುದು!

ತನ್ನ ಕಣ್ಣ ಬೆಳಕಿನ ಬಣ್ಣದ ಸೀರೆಯನ್ನೇ ಉಟ್ಟಿದ್ದಳು. ಅದರ ಮೇಲೆ ಚಿಟ್ಟೆಯ ಚಿತ್ರ; ಅದರ ಮಧ್ಯೆ ಹುಡುಗಿ, ಎಲೆಯ ಮಧ್ಯೆ ಅರಳಿನಿಂತ ಹೊಸ ಗುಲಾಬಿಯಂತೆ ಕಂಡಳು.

ಸದ್ಯ ಹಜಾರಕ್ಕೊಮ್ಮೆ ಹಾರಿ ಬರಬಾರದೆ ಹುಡುಗಿ....ನನ್ನ ಕೂಗಾದರೂ ಕೇಳಿಸೀತು.... ಅಗೋ.... ಹಾಡತೊಡಗಿದಳು. ನಾನಿಲ್ಲಿ ಹಾರಾಡುತ್ತಿದ್ದೇನೆ ಕೂಗಿ ಕೂಗಿ. ಅವಳು ಅಲ್ಲಿ ಕೇಳಿಸದವಳಂತೆ ಹಾಡುತ್ತಿದ್ದಾಳೆ.

ಹೊಗೆಯ ಬಂಡಿ ನೀರು ತೆಗೆದುಕೊಂಡಾದ ಮೇಲೆ ಊದುವಂತೆ ಉಸಿರು ಬಿಟ್ಟೆ. ವಾಪಸು ಹೋಗೋಣವೇ ಎನ್ನಿಸಿತು.

ಥೇ.. .ಥೆ ಅಪ್ಪ ರಂಗಣ್ಣನವರನ್ನ ನೋಡಿಕೊಂಡೇ ಬರಬೇಕೆಂದು, 'ಅದೇನೊ ನಿನ್ನೆ ಸಂಜೆ ಹೇಳಿದ್ದರಂತಲ್ಲ ಅದಕ್ಕಾಗಿ ನನ್ನ ಕಳುಹಿಸಿದ್ದಾರೆಂದೂ ಹೇಳಿ ಅವರೇನು ಹೇಳಿದರು ಅನ್ನೋದನ್ನು 'ಚಾಚೂ' ಮರೆಯದೆ ಹೇಳಬೇಕೆಂದು' ಹೇಳಿ ನನಗೆ ಬಿಡುವಿಲ್ಲದಿದ್ದರೂ ಬಲವಂತಮಾಡಿ ಅಟ್ಟಿದ್ದಾರೆ.

ನಾನು ಹಾಗೇ ವಾಪಸು ಹೋದರೆ....ಅಪ್ಪಾಜಿ....ದೂರ್ವಾಸವಾಗುತ್ತಾರೆ. ಆಗಲಿ.... ಮತ್ತೆ ಕೂಗಿ ನೋಡೋಣ.

ಅಷ್ಟರಲ್ಲಿ ಆ ಹರಿಣಿ ವರಾಂಡಾಕ್ಕೆ ಹಾರಿಬಂದು ಅಲ್ಲಿದ್ದ ವಸ್ತುವೊಂದನ್ನು (ದೂರಕ್ಕೆ ಅದು ಪುಸ್ತಕದಂತೆ ಕಂಡಿತು) ತೆಗೆದುಕೊಂಡು ಪುನಃ ಒಳಕ್ಕೆ ಹೋದಳು.

'ಪುಸ್ತಕ ಓದಲು ಹೋದಳೇ ಮಹಾರಾಯತಿ. ಬಹುಶಃ ಕಾದಂಬರಿ ಇರಬೇಕು. ಕಾಮಿನಿಯರಿಗೆ ಕಾದಂಬರಿ ಕಂಡರೆ ಕಲ್ಲುಸಕ್ಕರೆ ಕಂಡಂತೆ. ಅನ್ನ, ನೀರು ಆದಕೂಡಲೆ ಅದಕ್ಕೆ ಕೈಹಾಕುತ್ತಾರೆ. ಪ್ರಕಟವಾದ ಕಾದಂಬರಿಗಳನ್ನೆಲ್ಲ 'ಭರ್' ಎಂದು ಓದಿಬಿಡುತ್ತಾರೆ. ಓದಿದ ಮರುಕ್ಷಣದಲ್ಲೇ, ಓದಿದ ಕಾದಂಬರಿಯ ಹೆಸರೇನು, ಕಥೆಯೇನು, ಅದರಲ್ಲಿನ ಪಾತ್ರಗಳಾವುವು ಎಂದು ಕೇಳಿದರಂತೂ ದೇವರೇ ಗತಿ. ಪ್ರತಿಯೊಂದು ಮಾತಿಗೂ ಪರವಾಯಿಲ್ಲ ಎಂದು ಹೇಳಿಬಿಟ್ಟು ಪಾರಾಗುತ್ತಾರೆ. ಹೋಗಲಿ, ಕಾದಂಬರಿ ಸಾಮಾಜಿಕವೋ, ಐತಿಹಾಸಿಕವೋ ಅಥವಾ ಪೌರಾಣಿಕವೋ ಎಂದು ಕೇಳಿದಾಗ, "ಅಯ್ಯೋ ಯಾವುದೊ, ಅದು ಕಟ್ಟಿಕೊಂಡು ನಮಗೇನು....ಹೊತ್ತುಹೋದ್ದೆಲ್ಲ ಒಂದು" ಅನ್ನೋದು' ಅಂದುಕೊಂಡೆ. ಯೋಚಿಸುತ್ತ ಯೋಚಿಸುತ್ತ ನನ್ನ ಮನೋಭೂಮಿಯಲ್ಲಿ (ನನಗೆ ಇನ್ನಾವುದೂ ಭೂಮಿ-ಕಾಣಿ ಇಲ್ಲ) ಸಾಹಿತ್ಯಸೌಧ ನಿರ್ಮಿಸಿಕೊಂಡು ನಲಿದೆ. ಗೇಟಿನ ಸಲಾಕೆಯ ಬಿಸಿ ತಗುಲಿ ನನ್ನ ನಲಿವು ನಿಂತು ನೋವು ಆರಂಭವಾಯಿತು.

ಸುತ್ತಮುತ್ತ ಗಾಬರಿಯಿಂದ ನೋಡಿದೆ. ಯಾರೂ ಬಂದ ಸುಳಿವಿಲ್ಲ. ಜೋರಾಗಿ ಕೂಗಿದೆ. ಕಾದಂಬರಿಯಲ್ಲಿ ತಲ್ಲೀನಳಾದ ಹುಡುಗಿಗಂತೂ ನನ್ನ ಕೂಗು ಕೇಳಿಸೊಲ್ಲ. ಮನೆಯಲ್ಲಿರುವ ಮಿಕ್ಕವರಿಗಾದರೂ ಕೇಳಿಸಬೇಡವೆ! ಬಂದವರಿಗೆ ಬಾಗಿಲು ತೆಗೆಯದಂಥ ಎಂಥ ಬೇಜವಾಬ್ದಾರಿ ಮನೆಯಿದು ! ಕೇಳುವವರೇ ಇಲ್ಲ-ಯಾರಾದರೂ ಕಳ್ಳಕಾಕರು (ನಮ್ಮಲ್ಲಿ ಕಾಣಸಿಗುವ 'ಕಾಕಾ' ಗಳಿಗೂ ಇವರಿಗೂ ಯಾವ ಸಂಬಂಧವೂ ಇಲ್ಲ) ನುಗ್ಗಿ ಕೈಗೆ ಸಿಕ್ಕಿದ್ದನ್ನು ಹೊತ್ತುಕೊಂಡು ಹೋದರೇನು ಗತಿ! ಎನ್ನಿಸಿತು. 'ರೀ' ಎಂದು ರೋದಿಸಿದ್ದಾಯಿತು. ಅರಚಿದ್ದಾಯಿತು. ಕೂಗಿದ್ದಾಯಿತು. ಬಿಸಿಲು ಬೇರೆ, ಒಂದುಕಡೆ ನೆತ್ತಿಯನ್ನು ಬೆಚ್ಚಗೆ ಮಾಡಿ, ಚುರುಗುಟ್ಟಿಸುತ್ತಿತ್ತು.

ಕೊಂಚ ಹೊತ್ತು ದಿಙ್ಮೂಢನಾಗಿ ನಿಂತೆ. ಇದಕ್ಕೇನುಪಾಯ?— ಎಂದು ಯೋಚಿಸಿದೆ. ಹಲಕೆಲವು ಕಥೆ ಕಾದಂಬರಿಗಳಲ್ಲಿ ಕಥಾನಾಯಕರೇನೇನು ಮಾಡುತ್ತಾರೆ, ಅರ್ಥಾತ್ ಲೇಖಕರು ಏನೇನು ಮಾಡಿಸುತ್ತಾರೆಂದು ಸ್ಮರಿಸಿಕೊಂಡೆ. ಒಂದೊಂದಾಗಿ ನೆನೆಸಿಕೊಂಡೆ. ಅಂಥ ಸೌಲಭ್ಯಗಳೇನಾದರೂ ಇಲ್ಲಿ ಸಿಗಬಲ್ಲವೆ?–ಎಂದು ವೀಕ್ಷಿಸಿದೆ, ತರ್ಕಿಸಿದೆ....ಗಗನಚುಂಬಿಗಳಾದ ಏಳು ಸುತ್ತಿನ ಕೋಟೆಯ ಗೋಡೆಗಳನ್ನು ನಿಮಿಷಮಾತ್ರದಲ್ಲಿ ಅದರ ಪಕ್ಕದಲ್ಲಿ ಬೆಳೆದು ಒಣಗಿನಿಂತಿದ್ದ ಮೋಟು ಮರದ ಸಹಾಯದಿಂದಲೇ, ಕಾಳರಾತ್ರಿಯಲ್ಲಿ, ಗೋಡೆಗೆ ಯಾರೊ ತಗುಲಿಸಿದ್ದ ಹಗ್ಗದ ತುದಿಯನ್ನು ತನಗಾಗಿಯೇ ಇಟ್ಟಿದ್ದವನೋಪಾದಿಯಲ್ಲಿ ಕೈಗೆ ತೆಗೆದುಕೊಂಡು, ಹತ್ತಿ, ಅದೇ ಹಗ್ಗದ ಸಹಾಯದಿಂದ ಒಳಗಿಳಿದು ಊರಿನ ಕೇರಿಯಲ್ಲಿ ಜನಸಂದಣಿಯ ಮಧ್ಯದಲ್ಲಿ, ಅರಮನೆಗಳ ಮಹಾದ್ವಾರಗಳಲ್ಲಿ ಯಾರಕಣ್ಣಿಗೂ ಬೀಳದೆ, ಅಕಸ್ಮಾತ್ ಬಿದ್ದರೂ ಇದ್ದ ಒಂದೇ ಒಂದು ಚೂರಿಯಿಂದ ಹೋರಾಡಿ ಹೆಣಗಳನ್ನು ಉರುಳಿಸಿ, ನಿರ್ಭಯನಾಗಿ ಅಡೆತಡೆಯಿಲ್ಲದೆ ಅಂತಃಪುರವನ್ನು ತಲುಪಿ ಹಂಸತೂಲಿಕಾತಲ್ಪದ ಮೇಲೆ ನಿದ್ರಾಲೋಲುಪಳಾಗಿರುವ ಶತ್ರುರಾಜಕುಮಾರಿಯನ್ನು ಕೈಹಿಡಿದೆತ್ತುವ ಕಟ್ಟಾಳುವನ್ನು ನೆನೆದುಕೊಂಡೆ....ಕೀಲುಕುದುರೆ, ಮಂತ್ರದ ಮಣಿ, ಚಾಪೆ ಕೋಲುಗಳನ್ನು ಹೇಗೋ ಸಂಪಾದಿಸಿಕೊಂಡು ಅದ್ಭುತಗಳನ್ನು ಸಾಧಿಸಿದ ಸಣಕಲವೀರರ ಚಿತ್ರಗಳೂ ನನ್ನ ಮನಸ್ಸಿಗೆ ಸುಳಿಯದಿರಲಿಲ್ಲ....

ಅಂಥವರೆಲ್ಲ ಎಂಥೆಂಥ ಕೆಲಸಗಳನ್ನು ಮಾಡಿದ್ದಾರೆ. ಸಪ್ತಸಮುದ್ರಗಳನ್ನೂ ಸಪ್ತವಲಯಗಳನ್ನೂ ದಾಟಿದ್ದಾರೆ. ನನ್ನದೇನು ಮಹಾ, ಒಂದು ಏಳಡಿ ಗೇಟನ್ನು ದಾಟುವುದು ಎಂದು ಯೋಚಿಸಿ, ಈ ಕಂಠಶೋಷಣೆಗಿಂತ ಲಂಘಿಸುವುದೇ ಪರಮಸುಖವೆಂದು ತಿಳಿದೆ. ಮೆಲ್ಲನೆ ಬಟ್ಟೆಗಳನ್ನು ಸರಿಮಾಡಿಕೊಂಡು ವಸ್ತ್ರಸನ್ನಧನಾಗಿ ಗೇಟಿನ ಅರ್ಧದವರೆಗೂ ಹತ್ತಿನಿಂತೆ. ಕ್ಷಣಕಾಲ ಮೈಜುಮ್ಮೆಂದರೂ, ಏನೋ ಒಂದು ರೀತಿಯ ಉತ್ಸಾಹ ಬಂದು, ಆ ಹುಡುಗಿಯನ್ನು ನೆನಸಿಕೊಂಡು ಕೆಳಕ್ಕೆ ಧುಮುಕಿದೆ.

ಬೂಟುಗಾಲಿನಿಂದ ಒಣನೆಲದ ಮೇಲೆ ಧುಮುಕಿದ್ದರಿಂದ ಅದರ ಶಬ್ದ ಕೊಂಚ ಜೋರಾಗಿಯೇ 'ಧಬ' ಎಂದು ನೆಲಸದ್ದು ಮಾಡಿತು. ಧುಮುಕಿ

ಮೊಡನೆ ಅಲ್ಲಾವುದೀನನ ಮಾಯಾದೀಪ ಹಚ್ಚಿದಾಗ ಬರುವ ಹೊಗೆಯಂತೆ ಧೂಳೆದ್ದು ಷರಾಯಿ ಹಾಳಾಯಿತು. ಮುಖದ ಬಣ್ಣ ಕೆಟ್ಟಿತು. ಬೇಗ ಬೇಗ ಇದ್ದುದರಲ್ಲೇ ಸರಿಪಡಿಸಿಕೊಳ್ಳತೊಡಗಿದೆ. ನನ್ನ ಶೋಕೀಲೋಚನ (ಶೋಕಿಗಾಗಿ ಹಾಕಿಕೊಳ್ಳುವ ಸುಲೋಚನ) ಕಳಚಿಕೊಂಡು ಕ್ಲೀನ್ ಮಾಡಿ ಕೊಂಡೆ, ಮುಖದ ಧೂಳೆಲ್ಲವನ್ನೂ ಒಂದು ಬಾರಿ ಕೊಡವಿ ಡಾಂಭೀರ್ಯದಿಂದ ನಿಂತು, ಆನಂತರ ಬಗ್ಗಿ ಬೂಟ್ಸು ಒರಸಿಕೊಳ್ಳುತ್ತಿದ್ದೆ.

ಅಷ್ಟುಹೊತ್ತಿಗೆ ನನ್ನ ರೆಟ್ಟೆಯನ್ನು ಯಾರೊ ಹಿಡಿದಿದ್ದರು. ಅವನ ಕೈಲಿ ಸಿಪ್ಪೆ ಸುಲಿದು ರಸ ಒಸರುತ್ತಿದ್ದ ದಪ್ಪ ಈರುಳ್ಳಿ ಹಾಗೂ ಬತಾಯಿ ಚಾಕು ಇತ್ತು. ಈರುಳ್ಳಿ ರಸದಲ್ಲಾಡಿದ್ದ ಅಂಗೈ ಕಂದುಬಣ್ಣಕ್ಕೆ ತಿರುಗಿದ್ದುವು. ಹಸ್ತಸಾಮುದ್ರಿಕ ಪರೀಕ್ಷೆಗಾಗಿ ಬಣ್ಣ ಸವರಿದಂತೆ ಅಂಗೈ ಗೆರೆಗಳಲ್ಲಿ ಕೊಳೆ ಸೇರಿಕೊಂಡು ಕಂಗೊಳಿಸುತ್ತಿತ್ತು. ಈರುಳ್ಳಿಯ ಖಾರದಿಂದಲೋ ಏನೊ ಅವನ ಕಣ್ಣುಮೂಗುಗಳು ಅಳುತ್ತಿದ್ದುವು. ಅದನ್ನು ಸರದಿಯ ಮೇರೆ ಎಡ ಬಲ ಮುಂಗೈಗಳಿಂದ ಒರಸಿಕೊಳ್ಳುತ್ತ ನನ್ನ ರೆಟ್ಟೆಹಿಡಿದು ಜಗ್ಗತೊಡಗಿದ. ನನ್ನನ್ನು ಉದ್ದೇಶಿಸಿ: "ಗೇಟು ಧುಮುಕಿ ಗಿಡದಡಿ ಅವಿತುಕೊಳ್ಳು ತ್ತೀಯಾ?"–ಎಂದನಾತ.

ನನಗೆ ಈ ಏಕವಚನದ ಪ್ರಯೋಗದಿಂದ ರೇಗಿತು. ಇವನಿಗೇನು 'ಮ್ಯಾನರ್ಸ್' ಸ್ವಲ್ಪವೂ ಗೊತ್ತಿಲ್ಲವೆಂದುಕೊಂಡು, ನನ್ನ ರೆಟ್ಟೆಗ್ರಹಣ ಮಾಡಿ ದವನನ್ನೊಂದು ಬಾರಿ ಕ್ರೂರವಾಗಿ ನೋಡಿದೆ. ಅವನು ನಿಂತ ನಿಲುವು.... ಎಣ್ಣೆಯೊಳಗೆ ಮುಳುಗಿ ತೇಲಿದ್ದರೂ ಬಾಚಣಿಗೆ ಕಾಣದ ಕ್ರಾಪು–ಅದನ್ನು ಕ್ರಾಪೆನ್ನಲು ಧೈರ್ಯ ಬೇಕು–ಬೆವರಿನಿಂದ ನೆನೆದು ಕೊಳೆಯಾದ ಬಿಳಿ ಅಂಗಿ, ಮೋಟು ಪಂಚೆ.

ಇವನ್ನು ಬಿಟ್ಟರೆ ಇನ್ನುಳಿದ ಮೈಯೆಲ್ಲ ಕಪ್ಪೇ ಕಪ್ಪಾಗಿ ಹೊಳೆಯು ತ್ತಿತ್ತು. ಅವನ ಈ ಅವತಾರ ನೋಡಿದ ಮೇಲೆ ಅವನೇ ಅವರ ಮನೆಯ 'ನಳ'ನೆಂದು ನಾನು ನಿರ್ಧರಿಸಿದೆ.

ಆತ ತನ್ನ ಮಸೀಭೂತಕರದಿಂದಲೇ ನನ್ನ ಕೋಟು ಹಿಡಿದಿದ್ದ. ಜೊತೆಗೆ ಈರುಳ್ಳಿಯಿಂದಲೇ ತಯಾರಿಸಿದ ವಿಗ್ರಹದಂತೆ ವಾಸನೆ ಬೀರ ತೊಡ ಗಿದ. ಅದರವಾಸನೆ ನನಗೆ ಮೊದಲೆ ಆಗದು....

"ಥೂ....ಮುಸಿಯಾಗುತ್ತೆ, ಬಿಡಯ್ಯಾ"–ಎಂದೆ.

ಆತ ತಾನು ಮೊದಲು ಹಿಡಿದಿದ್ದ ಜಾಗ ಬಿಟ್ಟು ಮತ್ತೊಂದು ಕಡೆ ಹಿಡಿದ. ಅಲ್ಲೂ ಅವನ ಕರೀಕೈಯ ಮುದ್ರೆ ಬಿತ್ತು. ನಾನು ಮತಿಗೆಟ್ಟೆ.

"ಥೂ....ದರಿದ್ರಾ, ಕೋಟೆಲ್ಲಾ ಹಾಳಾಯ್ತು ಕೈಬಿಡು....ರಂಗಣ್ಣನವರಿದ್ದಾರೆಯೊ ?"–ಎಂದು ಕೇಳಿದೆ.

ಅಡಿಗೆಯವನು ನನ್ನ ಎಡ ತೋಳನ್ನು ಬಿಟ್ಟು ಬಲ ತೋಳನ್ನು ಹಿಡಿದು ತಿರುಗಿಸಿ ಜಗ್ಗಿಸುತ್ತ,

"ಈ ಚಾನ್ಸ್ ಗೀನ್ಸ್ ನಮ್ಮತ್ರ ನಡೆಯೊಲ್ಲ....ಒಳ್ಳೊಳ್ಳೆ ಬಟ್ಟೆ ಹಾಕಿಕೊಂಡು ಬಂದುಬಿಟ್ಟು ಗೇಟು ದಾಟಿ ಒಳಗೆ ನುಗ್ಗಿ ಕೈಗೆ ಸಿಕ್ಕಿದ ಸಾಮಾನುಗಳನ್ನು ಸಾಗಿಸೋದು, ಸಂಜೆಯೊಳಗೆ ಅವನ್ನು ಗುಜರೀಪಾಲು ಮಾಡೋದು. ಇಂಥವೆಲ್ಲಾ ನನ್ನ ಮುಂದೆ ನಡೆಯೊಲ್ಲ ...ಪೋಲೀಸ್ ಸೂಪರಿಂಡೆಂಟ್ ಪಶುಪತಯ್ಯನವರ ಮನೆಯಲ್ಲಿ ನಾಲ್ಕು ವರ್ಷವಿದ್ದೆ. ಬ್ಲಾಕ್ ಮಾರ್ಕೆಟ್ ಭೀಮಯ್ಯನವರ ಮನೆಯಲ್ಲಿ ಎರಡು ವರ್ಷವಿದ್ದೆ. ಕತ್ತಲಿನಲ್ಲಿ ಅಕ್ಕಿಮೂಟೆ ಹೊತ್ತು ಸಾಗಿಸಲಾರದೆ ಬಿಟ್ಟೆ. ನಾನು ಎಷ್ಟು ಮನೆ ದೊನ್ನೆ ಎತ್ತಿದೀನಿ ಅಂತಬಲ್ಲೆ ಈ ಚಾನ್ಸ್ ನನ್ನ ಹತ್ತಿರ ನಡೆಯೋದೇ ಇಲ್ಲಾ....ಇಂಥ ಎಕ್ಸ್ಟೆನ್‌ಷನ್ ಕಳ್ಳರನ್ನು ಸಾವಿರ ಜನ ಹಿಡಿದಿದ್ದೇನೆ ಈ ವಯಸ್ಸಿಗೆ"

"ಏನಯ್ಯಾ ಬಾಯಿ ಹೋದ್ಹಾಗೆ ಮಾತಾಡ್ತೀಯಾ....... ಹಜಾರದ ಸಾಮಾನು ಹೋದದ್ದಕ್ಕೆ ನಾನು ಜವಾಬ್ದಾರನೇ? ನಿನಗೆಲ್ಲೋ ಬುದ್ಧಿ ಸ್ವಾಧೀನವಿಲ್ಲ ಅಂತ ಕಾಣುತ್ತೆ. ಯಾರೊಂದಿಗೆ ಮಾತನಾಡುತ್ತಿದ್ದಿಯೇ ಎಂಬುದನ್ನು ತಿಳಿದುಕೊ....ಸುಮ್ಮನೆ ತುಟಿಯೆಲ್ಲ ಹರಟಬೇಡ...."

"ಯಾರೊಂದಿಗೆ ಮಾತನಾಡುತ್ತೀ ಅಂತ ಕೇಳಿದೆಯಾ..ಕಳ್ಳನೊಂದಿಗೆ.. ಒಳ್ಳೇ ಕೋಟ್ ಬೂಟ್ ಹಾಕಿಕೊಂಡು ಮನೆಯಲ್ಲಿ ಯಾರೂ ಇಲ್ಲದ ವೇಳೆಯಲ್ಲಿ ನುಗ್ಗಿ ಕಳ್ಳತನ ಮಾಡೋದು....ಇಂಥ 'ರೋಗ್' ನನ್ನ ಹತ್ತಿರ ನಡೆಯೊಲ್ಲ. ಕೇಳಿದರೆ, ರಂಗಣ್ಣೋರಿದ್ದಾರೆಯೇ ಹಾಗೆ....ಹೀಗೆ ಅನ್ನೋದು...."

"ನಿನಗೆ ಹೆಚ್ಚು ಮಾತು ಬೇಕಾಗಿಲ್ಲ. ಹೋಗಿ ರಂಗಣ್ಣನೋರ್‍ನೋ ಅಥವಾ ಮನೆಯವರನ್ನೊ ಬರಹೇಳು."

"ಮನೆಯಲ್ಲಿ ಯಾರೂ ಇಲ್ಲ...."

"ಈಗ ನೋಡಿದೆ. ..ಯಾವುದೊ ಹುಡುಗಿ. .ಪಕ್ಕದ ಕೋಣೆಯಲ್ಲಿ"

"ಎಲಾ ಇವನ! ಹೊಂಚು ಹಾಕ್ತಾ ಕಾಯ್ತಾ ಇದ್ದಿಯೇನೊ ಹಾಗಾದರೆ....ನಿನಗೆ ನರಿಯಾಗಿ ಬುದ್ಧಿ ಕಲಿಸದಿದ್ದರೆ...." —ಎಂದುಕೊಂಡು ಪಕ್ಕದಲ್ಲಿ ಬಿದ್ದಿದ್ದ ಹಗ್ಗದ ಹುರಿಯನ್ನು ತೆಗೆದುಕೊಂಡು ನನ್ನ ಕೈಗಳನ್ನು ಕಟ್ಟಲು ಸನ್ನಧನಾದ. ನನ್ನ ಕೋಪ ಮೂಗಿನ ತುದಿಯನ್ನು ದಾಟಿತು. ಕಿವಿ ಕೆಂಪಾದುವು. ಶಿರೋನರಗಳುಬ್ಬಿ ಗಂಟಲು ಗಡುಸಾಯಿತು, ಧ್ವನಿ ಬಿರುಸಾಯಿತು.

ಈ ಮುರ್ಖ್ಯಾಳ ಹಿಂದೆ ಮುಂದೆ ನೋಡದೆ ಕೈಕಟ್ಟಲು ಹವಣಿಸುತ್ತಿದ್ದಾನೆಲ್ಲ ಎಂದುಕೊಂಡು ನನ್ನ ಕೈಗಳನ್ನು ಅವನಿಗೆ ಸಿಕ್ಕಿಸದಂತೆ ಅತ್ತ ಇತ್ತ ಝುಳಪಿಸುತ್ತ ಬಹಳ ಹೊತ್ತು ಹೆಣಗಿದೆ, ಮೈಯನ್ನು ಅತ್ತಲಿಂದಿತ್ತ ನುಲಿದಾಡಿಸಿದೆ. ಇದರಿಂದಾದ ಪರಿಣಾಮವೆಂದರೆ ಅಡಿಗೆಯವನು ತನ್ನ ಕೆಲಸವನ್ನು ತ್ವರೆಗೊಳಿಸಿದನು. ನನ್ನನ್ನು ಪ್ರಣಯಾವೇಶದಿಂದ ಬರಸೆಳೆದಪ್ಪುವ ಉನ್ಮಾದ ನಾಯಕನಂತೆ ಎಳೆದು ನನ್ನ ಎರಡು ಕೈಗಳನ್ನೂ ಜೋಡಿಸಿಕೊಂಡ. ನಾನು ನಿರುಪಾಯನಾದೆ. ನನ್ನ 'ಬಿಸ್ಕೆಟ್' ಕಲರ್ ಕೋಟು 'ಸ್ಲೇಟ್' ಕಲರ್ ಆಯಿತು.

ನಾನು ತತ್ಪ್ವರಾಧಕನಾಗಿದ್ದುದೇ ತಪ್ಪಾಯಿತು. ಅದೇ ಈ ರಾದ್ಧಾಂತಕ್ಕೆಲ್ಲಾ ರಹದಾರಿಯಾಯಿತೆಂದು ತಿಳಿದೆ. ಇವನು ಬಂದಕೂಡಲೇ ಕೈ ಬಿಸಿ ಮಾಡಬೇಕಾಗಿತ್ತು 'ಸರ್ವಂ ಲಂಚಮಯಂ ವಿಶ್ವಂ' ಎಂದುಕೊಂಡೆ. ದೇವರಿಗೆ ಕಾಯಿ ಹೊಡೆಯಲು ಪೂಜಾರಿಗೆ ಕಾಣಿಕೆ ಕೊಡೊಲ್ಲವೆ? ಅದೇ ರೀತಿ. ಇವನಿಗೂ ಏನಾದರೂ ಕೊಡಬೇಕಾಗಿತ್ತು. ಕೆಲವು ಅಧಿಕಾರಿಗಳು ತಮ್ಮ ಸೇವಕರುಗಳಿಗೇ ಇದನ್ನು ಹೇಳಿಕೊಟ್ಟು ತರಪೇತು ಮಾಡುತ್ತಾರೆ. ಅದೇ ರೀತಿ ಈತನದೂ. . ಛೇ! ಛೇ! ಎಂಥ ಕೆಲಸ ಮಾಡಿದೆ. ಇವನ ಪಾಲಿಗೆ ಕೊಂಚ 'ಲಂಚಾಮೃತ'ವನ್ನು ಸಲ್ಲಿಸದಿದ್ದು ಎಂಥ ಪ್ರಮಾದವಾಯಿತು ಎಂದುಕೊಂಡು, ಈಗಲೂ ಕೈ ಮಿಂಚಿಲ್ಲವೆಂದು "ಆ ಕೋಟಿನ ಜೇಬಿನಲ್ಲಿ ನಾಲ್ಕಾಣೆ ಇದೆ" ಎಂದೆ ಅವನ ಕಡೆ ತಿರುಗಿ.

ಈ ನಾಲ್ಕಾಣೆ ಅಡಿಗೆಯವನ ಕೋಪವನ್ನು ಶಮನಗೊಳಿಸಿ ಅವನ ಮೃಗೀಯ ವರ್ತನೆ ನಿಂತು, ನನಗೆ ಹಗ್ಗಬಂಧನದಿಂದ ವಿಮೋಚನೆಯಾಗುವು

ದೆಂದು ಭಾವಿಸಿದ್ದೆ. ಆದರೆ ಅಡಿಗೆಯವನು ರೊಚ್ಚಿಗೆದ್ದ. ನನ್ನ ಊಹೆ 'ಜಲಲಿಖಿತ'ವಾಯಿತು.

"ನಾಲ್ಕಾಣೆ ನಿಮ್ಮತ್ರಾನೇ ಇಟ್ಕೊಳ್ಳಿ....ಲಂಚ ಕೊಟ್ಟು ತಪ್ಪಿಸಿ ಕೊಳ್ಳೋಕೆ ನೋಡ್ತೀರೊ...ನಾನು ಪೋಲೀಸ್ ಅಧಿಕಾರಿಗಳ ಮನೇಲಿದ್ದೆ"....

"ಅದಕ್ಕೇ ನಾನು ಲಂಚ ಕೊಡೋಕೆ ಬರ್‍ತಾ ಇರೋದು....ನಾಲಿಗೆ ಬಿಗಿ ಹಿಡಿದು ಮಾತಾಡು...."

"ನಾಲಿಗೆ ಹೇಗೆ ಬಿಗಿ ಹಿಡಿಯೋದು ಕೊಂಚ ತೋರಿಸಿ...."

"ನಿನಗ್ಯಾಕೆ ಇದೆಲ್ಲ....ಮನೆಯವರನ್ನು ಬರಹೇಳು"

"ನಾನೇನು ಮನೆಯವನಲ್ಲದೆ ಅಡವಿಯವನೆ?"

"ನಿನ್ನತ್ರ ಏನು ಮಾತು...ಯಾರಾದರೂ ದೊಡ್ಡವರನ್ನು ಬರಹೇಳು.."

"ನಾನೇನು ಪುಟ್ಟ ಹುಡುಗನೇ ...ಗಡ್ಡಮೀಸೆ ಬಂದಿಲ್ಲವೇ ..."

"ಆ ಹುಡುಗಿಯನ್ನಾದ್ರೂ ಬರಹೇಳು...."

"ಆಗ್ಲೆ ಅಷ್ಟಕ್ಕೆ ಬಂದಿದೀಯೋ ಅಣ್ಣಾ . ಬಹಳ ದಿನದಿಂದ ಹಿಡಿಯ ಬೇಕು ಅಂತ ಹೊಂಚುಹಾಕ್ತಾ ಇದ್ದೆ. ಇವತ್ತು ಸಿಕ್ಕೆ. ಇನ್ನೇನು ಯಜ ಮಾನ್ರು ಊಟಕ್ಕೆ ಬರೊ ಹೊತ್ತಾಯಿತು. ಅವರೇ ವಿಚಾರಣೆ ನಡಸಿಕೊಳ್ಳಿ."

"ಒಳ್ಳೆ ಯಜಮಾನ್ರು ...ನಿನ್ನಂಥ ಅಸಂಸ್ಕೃತ ಆಳನ್ನು ಅಡಿಗೆಯವ ನನ್ನಾಗಿ ಇಟ್ಟುಕೊಂಡಿರುವವರು!....ಇಷ್ಟೊಂದು ಗಲಾಟೆಯಾದ್ರು 'ಗುಡುಂ' ಅಂತ ಒಳಗೆ ಕುಳಿತಿರುವ ಹುಡುಗಿ ಕಿವಡಿಯೊ. .." ಎಂದೆ.

ಅಡಿಗೆಯವನು ಮಾತು ಇದ್ದಿದ್ದೂ ಜೋರು ಮಾಡಿದ. ಹೋದ ವಾರ ಒನಕೆ ಹೋಯಿತು, ಮೊನ್ನೆ ಅನ್ನದ ತಪ್ಪಲೆ ಅಂತರ್ಧಾನವಾಯಿತು. ತುರಿಯೋಮಣೆ ತಪ್ಪಿಸಿಕೊಂಡಿದೆ: ಮಚ್ಚು ಮಾಯವಾಗಿದೆ. ಹಾಲಿನ ಪಾತ್ರೆ ಹಾಲೀ ಇಲ್ಲ. ಅದೂ ಹೋಗಲಿ ಅಂದ್ರೆ ನಿನ್ನೆ ರಾತ್ರಿ ಕಾರಿನ ಲೈಟು ಗಳು ಮಂಗಮಾಯವಾಗಿದೆ. ಈ ರೀತಿಯಾದರೆ ಏನು ಗತಿ. ಪಕ್ಕದ ಮನೆ ಯಿಂದ್ಲೂ ಇದೇ ಕಂಪ್ಲೇಂಟು. . ಅಲ್ಲಿಗೂ ನೀನೇ ಹೋಗ್ತೀಯೊ....ಇಲ್ಲ ನಿನ್ನ ಗ್ಯಾಂಗಿನವರೇ ಇನ್ನಾರಾದ್ರೂ ಇದಾರೊ? ಅಮ್ಮಾವರು ಪ್ರತಿಯೊಂದನ್ನೂ ನಾನೇ ಸಾಗಿಸಿದೆನೆಂದು ನನ್ನನ್ನು ಆರೋಪಿಸಿ ನನ್ನ ಬೈದು ಬೈದು ಕೆಡ

ತ್ತಾರೆ....ಅದೃಷ್ಟಕ್ಕೆ ಅಮ್ಮಾವರಿಲ್ಲ ಮನೇಲಿ, ಹರಿಹರಕ್ಕೆ ತಂಗೀ ಮನೆಗೆ ಹೋಗವ್ರೆ. ಇದ್ರೆ ಈಗಲೇ ಅವರ ಮುಂದೆ ನಿಲ್ಸಿ...."

"ಏ, ಮಡೆಯಾ ...ಯಜಮಾನ್ರು ಬರ್ಲಿ....ಆಗ ಗೊತ್ತಾಗುತ್ತೆ ನಾನು ಯಾರು ಅಂತ."

"ಅದೆಲ್ಲ ಬಿಡಯ್ಯಾ.. ಬಲುಮಾತುಗಾರನಂತೆ ಕಾಣ್ತೀಯಾ. ಪಳಗಿದ ಕಳ್ಳರೆಲ್ಲಾ ಹೀಗೆ....ಒಂದು ಸಂಸಾರಕ್ಕಾಗುವ ಸಲಕರಣೆಗಳನ್ನು ಜಮಾಯಿಸಿದ್ದೀ ಅಂತ ಕಾಣುತ್ತೆ. ಅವನ್ನೆಲ್ಲಾ ನೀನೇ ಇಟ್ಟುಕೊಂಡಿದೀಯೊ ಇಲ್ಲ ಗುಜರೀಪಾಲು ಮಾಡಿದೆಯೊ....ಅವನ್ನೆಲ್ಲಾ ತಂದುಬಿಡು....ಒಳ್ಳೆಯ ಮಾತಿನಿಂದ....ಇಲ್ಲ ಅದರ ಬೆಲೆ ಏನಾಗುತ್ತೊ ಕೊಟ್ಟುಬಿಡು....ಇಲ್ಲ, ಅನ್ಯಾಯವಾಗಿ ಪೋಲೀಸರಿಗೆ ಕೊಡ್ತಾರೆ. ಯಜಮಾನ್ರು ಅಮ್ಮಾವ್ರ ಮಾತ್ನೇ ಕಟ್ಕೊಂಡು ನನ್ನನ್ನೇ ಪೋಲೀಸಿಗೆ ಕೊಡ್ತೇನೆ ಅಂತಾರೆ. ಇನ್ನು ನಿನ್ನ ಬಿಡ್ತಾರ್ಯೆ?"

"ಲೋ, ಸ್ವಲ್ಪ ಗೌರವದಿಂದ ಮಾತಾಡು. ನಿನ್ನ ಮನೆ ಸಾಮಾನು ಹಾಳು ಮೂಳು ಕಂಡವರಾರು. ಮನೆಗೆ ಬಂದವರ ಮೇಲೆ ಕಳ್ಳತನ ಹೊರಿಸೋದು...."

"ನನಗೇನ್ ಬಿಡು ಪೋಲೀಸಿಗೆ ಕೊಟ್ಟರೆ ನೀನೇ ಬಾಯಿಬಿಡ್ತಿ."

"ನೀನೊಬ್ಬ ತಿಳಿಗೇಡಿ. ನಿನ್ನ ಹತ್ತಿರ ಮಾತಾಡೋನಿಗೆ ಬುದ್ಧಿಯಿಲ್ಲ. ಅಡಿಗೆಯವನ ಕೂಡ ಮಾತಾಡೋದಕ್ಕಿಂತ ಅವಿವೇಕಿಯ ಕೈಲಿ ವಾದ ಮಾಡಬಹುದು. ಹೋಗ್ಲಿ. ಆ ಹುಡುಗೀನಾದ್ರೂ ಬರಹೇಳು. ..ಯಾರು ಕಳ್ಳ ಅಂತ ಕಾಣುತ್ತೆ. ನೀನೋ. .ನಾನೋ?"

"ಆ. .ಏನೆಂದೆ? ನಾನು ಕಳ್ಳನೆ? ಸಬ್ ಡಿವಿಜನ್ ಸಾಹೇಬರ ಮನೆಯಲ್ಲಿ ಆರು ವರ್ಷವಿದ್ದೆ. ದಿವಾನರ ಜೊತೆಯಲ್ಲಿ ಅಡಿಗೆ ಮಾಡ್ಕೊಂಡು ಆರು ವರ್ಷವಿದ್ದೆ. ಮನೇಲಿ ಎಲ್ಲಾ ಸ್ವಾತಂತ್ರ್ಯ ನನಗೇ ಕೊಟ್ಟಿದ್ರು....ನನ್ನ ಕಳ್ಳ ಅಂತಿ."

"ಬಹುಶಃ ತಂಗಳನ್ನದ ಮೇಲೆ ಪೂರ್ಣ ಸ್ವಾತಂತ್ರ್ಯ ಕೊಟ್ಟಿದ್ದರು ಅಂತ ಕಾಣುತ್ತೆ. ತಂಗಳು ಮೇದು ಮೇದು ಮೆದುಳು ಮಂಕಾಗಿದೆ. ಅದಕ್ಕೇ ಹಿಂದಿನ ಯಜಮಾನರೆಲ್ಲ ನಿನಗೆ 'ಡಕ್ಕಲ್ ಪಟ್ಟ' ಕೊಟ್ಟು ಓಡಿಸಿರೋದು."

"ಏನೊ ಕದೀತಾ ಇದ್ದ ನಿನ್ನನ್ನು ಹಿಡಿದುಕೊಟ್ರೆ....ನನ್ನೇ ಕಳ್ಳಾ ಅಂತೀ....ಹಲ್ಲುದುರಿಸಿಬಿಡ್ತೇನೆ. ಜೋಕೆ," ಎಂದು ಈರುಳ್ಳಿ ವಾಸನೆ ಕಾರುತ್ತಿದ್ದ ಕೈಗಳಿಂದ ನನ್ನ ಮೂಗಿನ ಹೊಳ್ಳೆ ಹಿಂಡಿದ.

"ಸಧ್ಯ ನೀನು ಈರುಳ್ಳಿ ವಾಸನೆಯನ್ನು ಕಳೆದುಕೊಂಡುಬಂದ್ರೆ ಸಾಕು.. . ಥೂ ! "

"ಏನೊ, ಈರುಳ್ಳಿ...ಈರುಳ್ಳಿ ಅಂತ ಬಲ್ ಮಾತಾಡ್ತಿ..ತಗೊ ಈರುಳ್ಳಿ" ಎಂದು ತನ್ನ ಜೇಬಿನಲ್ಲಿದ್ದ ಫಲಹಾರಕ್ಕೆಂದಿಟ್ಟಿದ್ದ ಈರುಳ್ಳಿಯನ್ನು ಅನಾಮತ್ತು ನನ್ನ ಬಾಯಿಗೆ ಬಲವಂತವಾಗಿ ತುರುಕಿಬಿಟ್ಟು ನಾನು ಮಾತನಾಡದ ಹಾಗೆ ಮಾಡಿದ. ನನ್ನ ಕೈಕಟ್ಟಿ ಮುಗಿಸಿದ್ದ ಆತ, ನನ್ನನ್ನು ಕಂಬಕ್ಕೆ ಕಟ್ಟಲು ಪ್ರಯತ್ನಿಸಿದ , ಎಳೆದುಕೊಂಡುಹೋಗಲು ಸಿದ್ಧನಾದ.

ನಾನು ಆಗ ಮಾತಾಡುವಂತೆಯೂ ಇರಲಿಲ್ಲ. ಬಾಯಲ್ಲಿ ಈರುಳ್ಳಿ ಕುಳಿತಿತ್ತು. ಜೋರಾಗಿ ಉಸುರೆಳೆದುಕೊಂಡು ಈರುಳ್ಳಿಯನ್ನು ಉಗುಳಲು ಪ್ರಯತ್ನಿಸಿದೆ. ನಾಲ್ಕೈದುಸಾರಿ ಜಗ್ಗಾಡಿದ ಮೇಲೆ ಜೋರಾಗಿ ಕೂಗಲೆತ್ನಿಸಿದೆ. ಈರುಳ್ಳಿ ಹೊರಗೆ ಬಂದು 'ಹೋ' ಎಂದು ನನ್ನ ಕಿರುಚು ಜೋರಾಗಿ ಕೇಳಿಸಿತು.

ಆಗ ಹುಡುಗಿ ಅಲ್ಲಿಗೆ ಓಡಿ ಬಂದು, ಅಡಿಗೆಯವನು ನನ್ನನ್ನು ಕಂಬಕ್ಕೆ ಕಟ್ಟುತ್ತಿರುವುದನ್ನು ನೋಡಿ ಗಾಬರಿಯಿಂದ :

"ಏನೋ ಅದು....ಅವಾಂತರ ? " ಎಂದು ಕೇಳಿದಳು.

"ನೋಡ್ರವ್ವಾ, ಯಾವನೊ ಸೂಟ್‌ವಾಲಾ ಕಳ್ಳತನಕ್ಕೆ ಮನೆಗಿಳಿದಿದ್ದ. ಹಿಡಿದಾಕ್ದೆ. ಬಾಯಿಗೆ ಈರುಳ್ಳಿ ತುರುಕಿದ್ದೆ....ಉಗಿದು....ಕಿರಿಚಿದ ಅಷ್ಟೆ! ಯಜಮಾನ್ರು ಬರ್ಲಿ ಅಂತ ಕಾದಿದ್ದೇನೆ...."

ಹುಡುಗಿ ನನ್ನ ಮುಖ ನೋಡಿದಳು. ಒಡನೆಯೇ ಬೆದರಿದ ಹರಿಣಿಯಂತೆ ಕಣ್ಣನ್ನು ಪಿಳುಗುಟ್ಟಿಸಿದಳು "ಐ ಆಮ್ ಸಾರಿ, ತಾವಾರು ? " ಎಂದಳು.

"ನಾನು ರಾಮಣ್ಣನೋರ ಮಗ. ರಂಗಣ್ಣನವರ ಹತ್ತಿರಕ್ಕೆ ಯಾವುದೋ ಕೆಲಸಕ್ಕೆ ನಮ್ಮ ತಂದೆ ಕಳುಹಿಸಿದ್ದರು" ಎಂದೆ....ಹುಡುಗಿಗೆ ಬಹಳ ರೇಗಿ ಹೋಗಿ ಹಿಂದಕ್ಕೋಡಿಬಂದು ಅಡಿಗೆಯವನ ಕೆನ್ನೆಗೆ ಎರಡು ಥಳಿಸಿ "ಕತ್ತೇ ಮಗನೆ..ಇವರನ್ನೇನೊ ನೀನು ಕಳ್ಳರು ಅಂತ ಹಿಡಿದುಕೊಳ್ಳೋದು. ..

ತಲೆ ತಿರುಗುತ್ತದೆಯೋ....ಅವರ ಕಾಲಿಗೆ ಬಿದ್ದು ತಪ್ಪಾಯಿತು ಅಂತ ಕೇಳಿಕೊ" ಎಂದಳು.

"ನೋಡ್ರವ್ವಾ ಇವರು ಗೇಟು ಹಾರಿಬಂದ್ರು. ಅದಕ್ಕೆ ಕಟ್ಟಿದೆ. ಇವರು ಗೇಟು ಏಕೆ ಹಾರಬೇಕಾಗಿತ್ತು ?"

"ಕೂಗಿ ಕೂಗಿ ಸಾಕಾಯ್ತು ಹಾರಿದೆ" ಎಂದೆ ನಾನು.

"ಓಹೊ ಈ ಗೇಟಿನಲ್ಲಿ ಕೂಗಿದಿರೊ" ಎಂದಳು ಹುಡುಗಿ.

"ಹೂಂ" ಎಂದೆ.

"ಛೆ! ಛೆ! ನಿಮಗೆ ಗೊತ್ತಿಲ್ಲ, ಹಾಗಾದ್ರೆ. ನಿತ್ಯೋಪಯೋಗಕ್ಕೆಂದು ಬೇರೆ ಕಡೆ ಚಿಕ್ಕ ಬಾಗಿಲು ಇದೆ" ಅಂದು ಚಿಕ್ಕ ಬಾಗಿಲನ್ನು ತೋರಿಸಿದಳು. "ಅಲ್ವೋ....ಯಾರು ಏನು ಅಂತ ವಿಚಾರಿಸಬೇಡವೇ!" ಎಂದಳು, ಆ 'ನಳ'ನ ಕಡೆ ತಿರುಗಿ.

"ಅವನಿಗೆ ಅಷ್ಟು ಮೆದುಳಿದ್ದರೆ ತಾನೇ.. ." ಎಂದೆ.

ಅಡಿಗೆಯವನು ನೆಲ ನೋಡುತ್ತ ನಿಂತ. ಹುಡುಗಿ ಅವನನ್ನು ಕುರಿತು "ನಾಚಿಕೆಯಾಗೊಲ್ವೇ. ..ಹೆಣಮುಂಡೇಗಂಡ... ಏ ನಾ ದ್ರೂ ಅ ನಾ ಹು ತ ಮಾಡ್ತಾ ಇರ್ತೀ....ಥೂ ನಿನ್ನಮುಖಕ್ಕೆ ಬೆಂಕಿ ಹಾಕ, ನಡೀ ಅಡಿಗೆ ಮನೆಗೆ...." ಎಂದು ರೇಗಿದಳು. ರೇಗಿ ಕೆಂಪಗಾದಳು. ಕೆಂಪಗಾಗಿ ಕಂಗೊಳಿಸಿದಳು. ನಾನು ಕೈ ಕಟ್ಟಿಸಿಕೊಂಡು ಅವಳನ್ನೇ ನೋಡುತ್ತಿದ್ದೆ.

ಅಡಿಗೆಯವನು ಕುತ್ತಿಗೆಯ ಮೇಲಿದ್ದ ಕೊಳೆಯನ್ನುಜ್ಜುತ್ತ, ತನ್ನ ಪ್ಲಾನೆಲ್ಲಾ ಕೆಟ್ಟುಹೋಯಿತೆಂದು ಗೊಣಗಿಕೊಂಡು ಒಳಗೆ ಹೋದ.

"ದಯವಿಟ್ಟು ಏನೂ ತಿಳಿದುಕೊಳ್ಳಬೇಡಿ. ನೀವು ಆ ಚಿಕ್ಕ ಬಾಗಿಲಿನಿಂದ ಬರಬೇಕಾಗಿತ್ತು. ಎಲ್ಲರೂ ಓಡಾಡುವುದು ಆ ಬಾಗಿಲಿನಿಂದಲೇ, ಯಾರಾದ್ರೂ ಕೂಗಿದರೂ ನಾವು ನೋಡೋದು ಆ ಬಾಗಿಲನ್ನೇ. ಆಗಲೇ ಯಾರೋ ಕೂಗಿದ ಹಾಗಾಯಿತೆಂದು ನಾಲ್ಕೈದು ಸಾರಿ ಹೊರಗೆ ಇಣಕಿ ಆ ಬಾಗಿಲ ಕಡೆಗೆ ತಿರುಗಿ ನೋಡಿದೆ. ಯಾರೂ ಇರಲಿಲ್ಲ. ಸುಮ್ಮನಾಗಿಬಿಟ್ಟೆ. ನೀವೇ ಅಂತ ಕಾಣುತ್ತೆ ಆಗ ಕೂಗುತ್ತಿದ್ದವರು."

"ಓಹೊ. ಸರಿಸರಿ ನನಗೆ ಇದು ಗೊತ್ತಾಗಿಲ್ಲ. ಇದೇ ಮೇನ್ ಗೇಟ್ ಅಂತ ಕೂಗಿಕೂಗಿ ಸಾಕಾದೆ."

"ಅಯ್ಯೋ ಪಾಪ....ಅಯ್ ಆಮ್ ವೆರಿ ಸಾರಿ....ಆ ಅಡಿಗೆಯವನಿಗೆ ತಕ್ಕದ್ದು ಮಾಡಿಸ್ತೇನೆ....ಇದೇನು ನಿಮ್ಮ ಕೈ ಕಟ್ಟಿಹಾಕಿರೋದನ್ನು ಬಿಚ್ಚದೆ ಹಾಗೇ ಹೊರಟುಹೋಗವ್ನೆ....ಬಿಡಿಬಿಡಿ ನಾನು ಬಿಚ್ಚಿಬಿಡ್ತೇನೆ"—ಎಂದಳು.

ಅಡಿಗೆಯವ ತನ್ನ ಬಲವನ್ನೆಲ್ಲಾ ಬಿಟ್ಟು ಜೀರಿದ್ದರಿಂದ ಆ ಗಂಟು ಬಲವಾಗಿತ್ತು. ಆ ಹುಡುಗಿಯ ಕುಸುಮ ಕೋಮಲವಾದ ಬೆರಳುಗಳಿಂದ, ಮಿಸುನಿವರ್ಣದ ಉಗುರುಗಳಿಂದ ಆ ಗಂಟು ಬಿಡಿಸಲು ಸಾಧ್ಯವಾಗಲಿಲ್ಲ. ಇನ್ನು ಅಡಿಗೆಯವನನ್ನೇ ಈ ಗಂಟು ಬಿಡಿಸಲು ಕರೆಯುವುದು ಅಭಿಮಾನಕ್ಕೆ ಕುಂದೆನ್ನಿಸಿತೇನೊ ಆ ಹುಡುಗಿಗೆ. ಆದದ್ದಾಗಲಿ ಎಂದು ಅವಳು ಗಂಟಿಗೆ ಹಲ್ಲೇ ಹಾಕಿಬಿಟ್ಟಳು. ಆಗ ಅವಳು ಕುಂಕುಮದಂತೆ ಕೆಂಪಾಗಿ ಮಿಂಚಿದಳು. ಒಂದೆರಡುಬಾರಿ ಆ ಗಂಟು ಅವಳ ಹಲ್ಲಿಗೂ ಕೈಕೊಟ್ಟಿತು. ಆಗ ಅವಳ ಹಲ್ಲು ನನ್ನ ಕೈಗಳನ್ನು ತಿವಿದವು. ಅವಳ ತುಟಿಯ ಬಣ್ಣವೆಲ್ಲ ನನ್ನ ಕೈಗರ್ಧ, ಗಂಟಿಗರ್ಧ ಮೆತ್ತಿಕೊಂಡಿತು. ತನ್ನ ಸ್ತ್ರೀ ಸಹಜ ಲಜ್ಜೆಯನ್ನು ಬಿಟ್ಟುಬಿಡದೆ ಅವಳು ಗಂಟಿನೊಂದಿಗೆ ಹೆಣಗಾಡುತ್ತಿದ್ದಳು. ಮೂಳೆಯನ್ನು ಪದೇಪದೆ ಅಗಿಯುವ ನಾಯಿಯ ಮರಿಯಂತೆ ಅವಳು ಮುದ್ದಾಗಿ ವ್ಯೆದೋರಿದಳು ನನಗೆ.

"ಅರ್‍ರೆ, ಚಾಕು ಉಪಯೋಗಿಸಬಹುದಾಗಿತ್ತಲ್ಲಾ" ಅಂದೆ ನಾನು. ಅಷ್ಟು ಹೊತ್ತಿಗೆ ಗಂಟು ಬಿಚ್ಚಿಕೊಂಡಿತು.

ಕೈಯೆಲ್ಲ ಎಂಜಲಾಗಿತ್ತು. ಬ ಣ್ಣ ವಾ ಗಿ ತ್ತು. ಅದನ್ನು ಒರಸ ಬೇಕೆಂದು ತನ್ನ ಸೀರೆಯ ಸೆರಗೆತ್ತಿದಳು. ಅದೇ ಸಮಯಕ್ಕೆ ರಂಗಣ್ಣನವರು ಕೇಕರಿಸಿಕೊಂಡು ಬಂದರು.

"ಇದಾರೆ....ಇವರು ?....ಶಾರಿ....ಇದೇನೆ ಇದು ಹುಡುಗಾಟ...."

ಆ ಹುಡುಗಿ ನಾಚಿ ನೀರಾಗಿ ಕೋಣೆಗೆ ಹರಿದುಹೋದಳು. ನಾನು ಬೆವತುಹೋಗಿದ್ದೆ. ಪ್ರೈಮರಿ ಸ್ಕೂಲಿನ ಮಾಸ್ತರು, ಇನ್ಸ್‌ಪೆಕ್ಟರ್ ಬಂದಾಗ ಇರುವಂತೆ ನಾನಾಗಿದ್ದೆ.

"ನಾನು ರಾಮಣ್ಣನೋರ ಮಗ....ನಿಮ್ಮ ಹತ್ತಿರ ಏನೋ ಮಾತಾಡಿದ್ದೆನೆಂದು ಅಪ್ಪ ಹೇಳಿ ನಿಮ್ಮನ್ನು ಕಂಡುಬರುವಂತೆ ಕಳುಹಿಸಿದ್ದಾರೆ."

"ಓಹೊಹೊ....ರಾಮಣ್ಣನ ಮಗನೋ....ಬಾರಯ್ಯ....ಒಳಗೆ...."

"ಲೇ ಶಾರಿ....ನೀನೇ ಕಿಲಾಡಿ ಕಣೆ....ನಿನ್ನ ಮದುವೆಯಾಗೋ ಹುಡುಗನ್ನ ನಾನು ಮೊದಲು ನೋಡೋಣಾಂತ ಇದ್ರೆ....ನೀನೇ ಮೊದಲು....ಲೇ ಎಲ್ಲಿ ಹೋದ್ಯೆ...."

ಶಾರಿ ಆ ದಿನ ಪುನಃ ಈಚೆಗೇ ಬರಲಿಲ್ಲ. ರಂಗಣ್ಣನವರು ನನಗೆ ಅಂದಿನಿಂದಲೇ ವರೋಪಚಾರಕ್ಕೆ ಆರಂಭಿಸಿದರು. ಅದೇ ಅಡಿಗೆಯವನು ಬಂದು ಸಜ್ಜಿಗೆ ತೆಗೆದುಕೊಂಡು ಬಂದು ನನ್ನ ಮುಂದಿಟ್ಟು, "ನೋಡಿದಿರಾ ಸ್ವಾಮಿ ನಳಮಹಾತ್ಮೆ!" ಎಂದ. ಪಕ್ಕದ ಕೋಣೆಯ ಕಿಟಕಿಯಿಂದ ಶಾರಿಯ 'ಕಿಸಿ ಕಿಸಿ' ಸದ್ದು ತೂರಿಬಂದು ನನ್ನ ಕಿವಿಯ ಮೇಲೆ ಧಾಳಿ ನಡೆಸಿತು.

# ನಮ್ಮ ತಾತ

ನಮ್ಮ ತಾತನನ್ನು ನೀವು ನೋಡಿಲ್ಲ. ನೋಡದೇ ಇದ್ದುದೇ ಒಳ್ಳೆಯದಾಯಿತು. ಅವರದು ವಿಚಿತ್ರ ಪ್ರಕೃತಿ. ಅವರಿಗೆ ಈಗ ೮೨ ವರ್ಷ ವಯಸ್ಸು. ಅವರಮುಖ ನೋಡಿದಕೂಡಲೇ ಅದು ಗೊತ್ತಾಗುತ್ತೆ. ಆದರೆ ಅವರು ಹೇಳುವುದು ತಮಗೆ ಇನ್ನೂ ೪೪ ಕೂಡ ದಾಟಿಲ್ಲ ಎಂದು. ೪೪ ವರ್ಷ ವಯಸ್ಸಿನ ರಾಷ್ಟ್ರೀಯ, ಅಂತರ-ರಾಷ್ಟ್ರೀಯ ಮುಖ್ಯ ವ್ಯಕ್ತಿಗಳನ್ನೆಲ್ಲಾ ಅವರು ತಮ್ಮ ಸಮಕಾಲೀನರೊ, ಒಂದೆರಡು ವರ್ಷ ಹಿಂಚೋ ಮುಂಚೋ ಎಂದು ನಿರ್ಧರಿಸಿ ತನ್ಮೂಲಕ ತಮ್ಮ ವಯಸ್ಸು ೪೪ ಎಂದೇ ಸಿದ್ಧಪಡಿಸುತ್ತಾರೆ. ಅದಕ್ಕೆ ಕಾರಣವಿಷ್ಟೆ. ಅವರನ್ನು ಸರ್ಕಾರವು ಅವರು ಕೊಟ್ಟಿದ್ದ ಹುಟ್ಟಿದ ತಾರೀಖು ಬಿಟ್ಟು ಅವರಿಗೆ ಆಗಿದ್ದ ವಯಸ್ಸಿನ ಆಧಾರದ ಮೇಲೆ ವಿಶ್ರಾಂತಿಕೊಟ್ಟಿತ್ತು.

ಆ ವಯಸ್ಸಿನಲ್ಲೂ ಅವರು ಬೆಳಗಿನ ಜಾವ, ಚಳಿ-ಮಳೆಯೆನ್ನದೆ ೫ ಘಂಟೆಗೆ ಎದ್ದು, ಎಲ್ಲರನ್ನೂ ಒಂದುಕಡೆಯಿಂದ ಕೂಗಿ, ಕರೆದು, ಬೆಳಗಾಯಿತು ಏಳಿ ಎಂದು ಅವಸರಿಸಿ, ಎದ್ದವರನ್ನೂ, ಏಳದೇ ಇದ್ದವರನ್ನೂ ತಾರತಮ್ಯವಿಲ್ಲದೆ ತೆಗಳಿ ಗಲಭೆಯೆಬ್ಬಿಸುತ್ತಾರೆ. ನಮ್ಮೆಲ್ಲರಿಗೂ ಬೆಳಗಿನ ನಿದ್ದೆ ಕೆಡಿಸಿದರಲ್ಲಾ ಎಂದು ಕೋಪ ಅವರ ಮೇಲೆ. ಆದರೂ ನಾವು ಯಾವುದಾದರೊಂದು ನೆಪಮಾಡಿಕೊಂಡು ಹಾಸಿಗೆಗೇ ಅಂಟಿಕೊಂಡಿರುತ್ತೇವೆ.

ಆಗ ತಾತ ತಡಮಾಡದೆ ಎದ್ದು ಒಂದು ಮೂಲೆಗೆ ಹೋಗಿ ಗೋಡೆಯನ್ನು ಕಾಲುಗಳಿಂದ ಒದ್ದು, ಕೈ ಹಿಡಿಗಳಿಂದ ಗುದ್ದಿ, ಭುಜಗಳಿಂದ ಡಿಕ್ಕಿಸಿ, ತಲೆಕೆಳಗಾಗಿ ನಿಂತು, ಕೈಕಾಲು ಮಡಿಸಿ ಉಸಿರು ತೆಗೆದುಕೊಳ್ಳುವುದೂ ಬಿಡುವುದೂ ಮಾಡುತ್ತಾರೆ. ತಾತನ ಈ ದ್ರಾವಿಡ ವ್ಯಾಯಾಮವನ್ನು ಹೊರಗಿನವರಾರಾದರೂ ಹೊಸದಾಗಿ ನೋಡಿದಲ್ಲಿ 'ಇದೇನು ತಾತನಿಗೆ ಭೂತದ ಚೇಷ್ಟೆ ಇದೆ' ಎಂದು ತಿಳಿದುಕೊಳ್ಳುತ್ತಾರೆ. ಆದರೆ ತಾತ ಈ ರೀತಿ ವ್ಯಾಯಾಮ ಮಾಡುವುದು ಕೈಕಾಲುಗಳಿಗೆ ಶಕ್ತಿ ಬರಲೆಂದು ಎಂಬುದು ನಿತ್ಯ ನೋಡುವ ನಮಗೆ ಗೊತ್ತು.

ನಮ್ಮ ಅಪ್ಪಾಜಿ-ಅಮ್ಮ ಒಂದೊಂದು ಬಾರಿ "ಈ ಮುದಿ ವಯಸ್ಸಿನಲ್ಲಿ ಕೈಕಾಲಿಗೆ ಶಕ್ತಿ ತಕ್ಕೊಂಡು ಏನು 'ಕಿಸಿ'ಯಬೇಕಾಗಿದೆ" ಎಂದು ತಾತನಿಗೆ ಕೇಳಿಸದ ಹಾಗೆ ಕೂಗಾಡಿಕೊಳ್ಳುತ್ತಾರೆ. ಮನೆಯ ಹಿರಿತನದ ಗೌರವಕ್ಕೆ ಒಳಗಾಗಿ ತಾತನ ಮುಂದೆ ತೆಪ್ಪಗಿರುತ್ತಾರೆ.

ಆದರೆ ನಮ್ಮ ಪಪ್ಪಿ ಒಂದು ದಿನ ಬೆಳಗಿನ ಜಾವ ಎದ್ದು ತಾತ ವ್ಯಾಯಾಮ ಮಾಡುತ್ತಿದ್ದುದನ್ನು ನೋಡಿ,

"ಏಕೆ ತಾತಾ ಹೀಗೆ ಮಾಡ್ತಿ"–ಎಂದು ಕೇಳಿದಳು.

"ಕಾಲಿಗೆ ಶಕ್ತಿ ಬರಲೀ ಅಂತ" ಎಂದು ತಾತ ಉತ್ತರಿಸಿದರು.

"ಕೈಕಾಲುಗಳಿಂದ ಗೋಡೆಯನ್ನು ಒದ್ದರೆ ಶಕ್ತಿ ಬರುತ್ಯೇ ತಾತಾ''

"ಹೌದಮ್ಮಾ" ಎಂದರು.

"ಹಾಗಾದರೆ.... ತಲೆಗೂ ಶಕ್ತಿ ತಗೋ ತಾತ. ತಲೆಯನ್ನೂ ಗೋಡೆಗೆ ಹೊಡಿ" ಎಂದಳು.

ಎಲ್ಲರೂ ನಕ್ಕರು. ತಾತ ಆ ರೀತಿ ತಲೆಗೆ ಶಕ್ತಿ ತೆಗೆದುಕೊಂಡರೆ ನಮಗೆ ಎಷ್ಟೋ ಸಲೀಸಾಗುತ್ತದೆ ಎಂದು ನಾವೆಲ್ಲ ಅಂದುಕೊಂಡೆವು. ತಾತ ಆಗ ಸುಮ್ಮನಿರದೆ, "ತಲೇಲಿರೊ ಬಲ ಇನ್ನೂ ಹೋಗಿಲ್ಲಮ್ಮಾ....ಅದು ಹೋದಮೇಲೆ ತಲೆಗೂ ತಗೋತೀನಿ" ಎಂದರು.

ತಾತ ವಾಕಿಂಗ್ ಹೊರಡುವ ಸಂದರ್ಭ, ಆಗಿನ 'ಮೇಕಪ್' ನೋಡತಕ್ಕದ್ದು. 'See make-up and die' ಅನ್ನುವಂತದು. ತಲೆ ಕುತ್ತಿಗೆ ಕೆನ್ನೆಗಳ ಪೂರ್ತ ಮುಚ್ಚುವಂಥ ಮಂಕೀ ಕ್ಯಾಪ್. (ತಾತ ಇರುವುದೂ ಒಂದು ರೀತಿಯ ಮಂಕಿಯಂತೆ). ನಮ್ಮ ಮೂರನೆಯ ಹುಡುಗ (ಅವನು ಮಿಡಲ್ ಎರಡನೆಯ ತರಗತಿಯಲ್ಲಿದ್ದು ನಾಲ್ಕನೆಯ ಪಾಠ ಓದುತ್ತಿದ್ದಾನೆ) ತಾತನ 'ಮಂಕೀ ಟೋಪಿ'ಯನ್ನು ಕುರಿತು ಅವಯವಾರ್ಥ ಹೇಳುತ್ತ ಮಂಕಿ ಎಂದರೆ ಕೋತಿ, ಕ್ಯಾಪ್ ಎಂದರೆ ಟೋಪಿ. ಆದ್ದರಿಂದ ಮಂಕೀಕ್ಯಾಪ್–ಅನ್ನು 'ಕೋತಿ ಟೋಪಿ' ಎಂದು ಕರೆದರೆ ತಪ್ಪಿಲ್ಲವೆಂದು ತನ್ನ ಕ್ಲೆಕೆಳಗಿನ ಹುಡುಗರೆಲ್ಲರಿಗೂ ಹೇಳಿಕೊಟ್ಟಿದ್ದಾನೆ.

ತಾತನಿಗೆ ಈ ಟೋಪಿಯ ಮೇಲೂ ಇನ್ನೊಂದು ಪೇಟವಿರಬೇಕು. ಕೋಟು ಪೇಟವಿಲ್ಲದೆ ತಾತ ಹೊಸಲು ದಾಟಿದವರೇ ಅಲ್ಲ. ಇಪ್ಪತ್ತೆರಡು

ಅಂಗುಲ ಉದ್ದ ಇಡಿಸಿದ್ದ ಫ್ಲಾನಲ್ ಷರಟು, ಅದನ್ನು ತೊಡಬೇಕಾದ್ರೆ ಸಂಕುಚಿತಾಸನ ಹಾಕಿ, ಹಣ್ಣಿನ ಸಿಪ್ಪೆಯಂತೆ ನಾಜೋಕಾಗಿ ಬಿಡಿಸಿ ತೊಡಿಸ ಬೇಕು. ಅಷ್ಟು ಬಿಗಿ, ಅಷ್ಟು ಹಳೆಯದು. ಎಲ್ಲಿ ಹರಿಯುತ್ತೋ ಎಂಬ ಭೀತಿ. ಆದರೂ ಆ ಫ್ಲಾನಲ್ ಅಂಗಿಗೆ ಪೆನ್‌ಷನ್ ಕೊಡಲ್ಲ ತಾತ. ನಮ್ಮ ಅಪ್ಪಾಜಿ ಇದನ್ನು ನೋಡಲಾರದೆ ತಾವೇ ಖುದ್ದು ಎರಡು ಫ್ಲಾನಲ್ ಅಂಗಿಗಳನ್ನು ಹೊಲಸಿ ತಂದುಕೊಟ್ಟಿದ್ದಾರೆ. ಆದರೂ ತಾತ ಅವುಗಳನ್ನು ತಮ್ಮ ಬೀರಿನೊಳ ಗಿಟ್ಟುಕೊಂಡು ಈ ಹಳೆಯ ಅಂಗಿಯೊಳಗೇ ಕತೆ ಹಾಕುತ್ತಿದ್ದಾರೆ. ಈ ಅಂಗಿಯ ಮೇಲೊಂದು ಕರಿಯ ಕೋಟು, ಮೊಣಕಾಲು ಮುಚ್ಚುವಂಥದು. ಮೊಣಕಾಲಿನವರೆಗೆ ಬರುವಂತೆ ಕಚ್ಚೆಹಾಕಿ ಉಟ್ಟ ಪಂಚೆ. ಬೆರಳುಗಳೂ ಹಿಮ್ಮಡಿಯೂ ಹೊರನೋಡುವಂತಿದ್ದ ಉಣ್ಣೆಯ ಕಾಲುಚೀಲಗಳು ನಿಲ್ಲುವುದ ಕ್ಕಾಗಿ ಕಟ್ಟಿದ್ದ ದಪ್ಪದಾರದ ತುದಿಗಳು ಹಿಮ್ಮಡಿಯ ಬಳಿ ನೇತಾಡುತ್ತಿರುತ್ತವೆ. ಅಟ್ಟೆಯೆಲ್ಲ ಒಂದೇ ಕಡೆ ಸವೆದು, ನಿಲ್ಲಿಸಿದರೆ ಉರುಳಾಡುವಂಥ ಬೂಟುಗಳು.... ಮೂಗಿನ ಮೇಲೆ ಎರಡು ಜೊತೆ ಕನ್ನಡಕಗಳು. ಒಂದು ಕಣ್ಣು ಕಾಣುವುದಕ್ಕೆ, ಮತ್ತೊಂದು ದಾರಿ ಕಾಣುವುದಕ್ಕೆ, ಇನ್ನೊಂದು ಓದುವುದಕ್ಕೆ, ಮಗದೊಂದು ಬರೆಯುವುದಕ್ಕೆ. ಈ ನಾಲ್ಕು ಕನ್ನಡಕಗಳನ್ನು ಬಂಧನದಲ್ಲಿ ಹಿಡಿದು ನಿಲ್ಲಿಸಿದ ತಂತು ಕಿವಿಯನ್ನು ನಾಲ್ಕಾರು ಬಾರಿ ಬಳಸಿ ನಿಂತಿರುತ್ತದೆ. ಇದರ ಮೇಲೆ ಅವರು ನಡೆಯುವ ರೀತಿಯೋ, ಹೊಸದಾಗಿ ಹಿಮ್ಮಡಿ ಎತ್ತರದ ಷೂ ಹಾಕಿ ಕೊಂಡು ನಡಿಗೆ ಕಲಿಯುತ್ತಿರುವ ಹಳ್ಳಿ ಹುಡುಗಿಯಂತೆ. ನಮಗಂತೂ ಎಲ್ಲಿ ತಾತ ಜಾರಿಬಿದ್ದು ಒಸಡು (ಏಕೆಂದರೆ ಆಗಲೇ ಹಲ್ಲು ಬಿದ್ದುಹೋಗಿರುವುದರಿಂದ) ಮುರಿದುಹೋಗುತ್ತದೆಯೋ ಎಂಬ ಭೀತಿ. ತಮ್ಮ ವಾಕಿಂಗ್ ಆದ್ಯಂತ ಇದೇ ನಡಿಗೆ .

ಒಂದೊಂದು ಸಾರಿ ತಾತ ನನ್ನನ್ನೂ ವಾಕಿಂಗ್‌ಗೆ ಕರೆದುಕೊಂಡು ಹೋಗುತ್ತಿದ್ದರು, ಜೊತೆಗೆ. ಅವರು ವಾಕಿಂಗ್‌ನಿಂದ ಬರುವುದು ಒಂಭತ್ತು ಗಂಟೆಯಾಗುತ್ತಿತ್ತು. ಅಷ್ಟರೊಳಗೆ ಉಳಿದ ಹುಡುಗರು ತಿಂಡಿಯನ್ನೆಲ್ಲಾ ತಿಂದು ನನಗೆ ಸ್ವಲ್ಪವೇ ಇಟ್ಟಿರುತ್ತಿದ್ದರು. ಓಡಾಡಿ ಬಂದ ನನಗೆ ಅದು ಸಾಲದೇ ಬರುತ್ತಿತ್ತು. ಆದ್ದರಿಂದ ನಾನು ತಾತನೊಂದಿಗೆ ವಾಕಿಂಗ್ ಹೋಗು ವುದನ್ನು ತಪ್ಪಿಸಿಕೊಳ್ಳತೊಡಗುತ್ತೇನೆ.

ನಮ್ಮ ತಾತನಿಗೆ ಇನ್ನೊಂದು ಚಪಲ. ಇಂಗ್ಲೀಷು ಕಲಿಯಬೇಕೆಂಬುದು. ತಾಲ್ಲೋಕಾಫೀಸಿನಲ್ಲಿ 'ಇಂದಾ–ಗೆ'ಯಾಗಿ ನೌಕರಿ ಮಾಡಿದ್ದರಿಂದ ಅವರಿಗೆ ಒಂದೆರಡು ಶಬ್ದಗಳು ಬಂದಿದ್ದವಾದರೂ ಹಿಂದೂ ಪೇಪರ್ ಓದುವಷ್ಟು ಇಂಗ್ಲೀಷನ್ನು ಈ ವಯಸ್ಸಿನಲ್ಲಿ ಕಲಿಯಬೇಕೆಂದು ಅವರ ಚಪಲ. ಆಗ, ಕೆಲಸದಲ್ಲಿದ್ದಾಗ ಅವರಿಗೆ ಬಿಡುವು ಇರಲಿಲ್ಲ. ಈಗ ಬಿಡುವಿದೆ. ಆದರೆ....

'ನಾನೇನಾದ್ರೂ ಚೆನ್ನಾಗಿ ಇಂಗ್ಲೀಷ್ ಓದೋದು ಬರೆಯೋದು ಕಲಿತ್ಕೊಂಡಿದ್ರೆ.... ಈ ಮಿನಿಷ್ಟರ್–ಗಿನಿಷ್ಟರ್‌ಗಳನ್ನೆಲ್ಲಾ ಅಲ್ಲಾಡಿಸಿಬಿಡುತ್ತಿದ್ದೆ' ಎಂದು ದಿನಕ್ಕೆ ನೂರು ಬಾರಿ ಹೇಳುತ್ತಾರೆ. ಅದೂ ನಿಜವಿರಬಹುದು ಅನ್ನಿಸುತ್ತದೆ. ಅಂತಹವರೇ ಅವರು. ತಾವು ಕೆಲಸದಲ್ಲಿದ್ದಾಗಲೇ ದಿ ಸೆಲ್ಫ್ ಇಂಗ್ಲೀಷ್ ಸ್ಟಡಿ, ಇಂಗ್ಲೀಷ್ ಕನ್ನಡ ಸ್ವಯಂ ಬೋಧಿನಿ.... ಇತ್ಯಾದಿ ಒಂದು ವಾರದಲ್ಲಿ ಇಂಗ್ಲಿಷ್ ಭಾಷೆಯನ್ನು ಕಲಿಸಿ, ಒಂದು ತಿಂಗಳಲ್ಲಿ ಭಾಷಾ ಸಂಪತ್ತನ್ನು ಹೆಚ್ಚುಗೊಳಿಸುವ ಅನೇಕ ಪುಸ್ತಕಗಳನ್ನು ಅವರು ತೆಗೆದಿಟ್ಟುಕೊಂಡಿದ್ದರು. ನಾನು ಎಲ್.ಎಸ್. ಓದುತ್ತಿದ್ದಾಗ ತಾತನಿಗೆ ಇಂಗ್ಲೀಷ್ ಹೇಳಿಕೊಡುತ್ತಿದ್ದೆ. ದಿನ ಸಂಜೆ ಒಂದು ಗಂಟೆ ಹೇಳಿಕೊಟ್ಟೆ. ನಾನು ಎಸ್.ಎಸ್.ಎಲ್.ಸಿ. ಪಾಸುಮಾಡಿದರೂ ತಾತ ಎಸ್, ನೊ, ಆಲ್‌ರೈಟ್ ಬಿಟ್ಟು ಹೊರಗೆ ಬರಲೇ ಇಲ್ಲ. ಆಗ ಓದಿದ್ದು ಆಗಲೇ....ಮುಂದಿನ ಗಳಿಗೆಯಲ್ಲಿ ಮರವು. ಆದರೂ ಅವರ ಅರವತ್ತರ ಮೊದಳಿಗೆ ಅದೇ ಚಪಲ. ಮನೆಗೆ ಯಾರಾದರೂ ಬಂದರೆ ತೀರಿತು, 'ನನಗೆ ಕೊಂಚ ಇಂಗ್ಲೀಷು ಹೇಳಿಕೊಡ್ತೀರಾ, ಕಲಿಯಬೇಕೂಂತ ಬಹಳ ಆಸೆಯಾಗ್ತಾ ಇದೆ' ಎಂದು ಕೇಳುತ್ತಾರೆ.

ಯಾರಾದರೂ ಏನಾದರೂ ಹೇಳಿದರೆ ತಾತ 'ಅದೇನು ಬಿಡಿ ಮಹಾ.... ನಮ್ಮ ಕಾಲದಲ್ಲಿ ಇದಕ್ಕಿಂತಲೂ ಹೆಚ್ಚಿಗೆ....' ಎಂದು ಡೋಂಗು ಹೊಡೆಯುವುದು ಸ್ವಭಾವ. ತಾವು ಯುವಕರಾಗಿದ್ದಾಗ ತಮ್ಮ ಪರಾಕ್ರಮಕ್ಕೆ ಇಲ್ಲದ ಮೆರಗು ಕೊಟ್ಟು ಕೇಳುವವರಿಗೆ ಬೇಸರ ಬರಿಸುವರೆಗೂ 'ಕೊರೆ'ಯುವುದು ತಾತನ ವೈಶಿಷ್ಟ್ಯ.

"ನಾವು ಹುಡುಗರಾಗಿದ್ದಾಗ ಹೀಗಿರಲಿಲ್ಲ (!). ಒಂದು ದಿನ ಎಲ್ಲರೂ ಕಬ್ಬನ್ ಪಾರ್ಕಿಗೆ ಹೋಗಿದ್ದೆವು...." ಎಂದು ತಾತ ಆರಂಭಿಸಿದರೆ ಆ ಕತೆಯನ್ನು ಕೇಳಿ ಕೇಳಿ ದಣಿದಿದ್ದ ಅವರ ಸ್ನೇಹಿತರು ಮಂಡಿಯ ಮಧ್ಯೆ ತಲೆ ಸಿಕ್ಕಿಸಿ ಕೊಂಡು ನಿದ್ರಿಸುತ್ತಿದ್ದರೂ ಬಿಡುತ್ತಿರಲಿಲ್ಲ, ಮುಂದುವರಿಸೇ ತೀರುತ್ತಿದ್ದರು.

"ಎಲ್ಲರೂ ಹುಲ್ಲಿನ ಮೇಲೆ ಕುಳಿತು ಒಂದಾಣೆ ಕಳ್ಳೇಕಾಯಿ ಹಾಕಿಸಿ ಕೊಂಡು ತಿನ್ನುತ್ತ ತಲೆಹರಟೆ ಹೊಡೆಯುತ್ತಿದ್ದೆವು. ಇದ್ದಕ್ಕಿದಂತೆ ಸೀನಿ ... ಅಲ್ಲ.... ಪರಶು ...ಉಹುಂ.... ಪಾಳಿ ಅಂತ ಕಾಣುತ್ತೆ 'ಏನ್ರಯ್ಯಾ ಈ ಕಳ್ಳೆ ಕಾಯನ್ನು ಕಬಳಿಸುವಂತೆ ಎರಡು ಹಿಡಿ ಗರಿಕೆ ಹುಲ್ಲನ್ನು ಯಾರಾದ್ರೂ ಗಸಗಸ ಅಗಿದು ನುಂಗಿಬಿಡ್ತೀರಾ ಎಂದು ಕೇಳಿದ."

"ಎಲ್ಲರೂ ಒಬ್ಬರಮುಖವನ್ನೊಬ್ಬರು ನೋಡಿಕೊಂಡರು. 'ನಾವೇನು ಹಸುಗಳು, ಕತ್ತೆಗಳು, ಕುದುರೆಗಳು ಕೆಟ್ಟುಹೋದೆವೆ....' ಎಂದರು. ಆದರೆ ನಾನು 'ತಿನ್ನುತ್ತೇನೆ' ಎಂದೆ. ಎಲ್ಲರೂ 'ನೀನೇನು ಕತ್ತೆಯೇ ? ' ಎಂದು ಕೇಳಿ ದರು. ನಾನು 'ಅಲ್ಲಯ್ಯಾ. . ಹುಲ್ಲು ತಿನ್ನುತ್ತೇನೆ ಪಂದ್ಯ ಕಟ್ಟಿದರೆ, ಹಿಡಿ ಗರಿಕೆಯಲ್ಲದಿದ್ದರೆ ಹೊರೆಗರಿಕೆ ತಿನ್ನುತ್ತೇನೆ' ಎಂದೆ."

"ಎಲ್ಲರೂ ನನ್ನನ್ನು ನೋಡಿ ನಕ್ಕರು. ನಾನು ರೇಗಿ 'ಇಪ್ಪತ್ತು ರೂಪಾಯಿ ಪಂದ್ಯ ಕಟ್ಟಲಿ.... ತಿನ್ನದಿದ್ದರೆ ಕೇಳಿ' ಎಂದೆ. ಅವರೆಲ್ಲ ಮಾತನಾಡಿ 'ಹೂಂ' ಎಂದರು. ಅಲ್ಲೇ ಹುಲ್ಲು ಕೀಳುವವಳ ಹತ್ತಿರ ಒಂದು ಹೊರೆ ಖರೀದಿ ಮಾಡಿ ನನ್ನ ಮುಂದೆ ಹಾಕಿದರು 'ಇಗೋ... ಅಗೋ' ಅನ್ನೋದರಲ್ಲಿ ಒಂದು ಹೊರೆ ಯನ್ನು ತಿಂದೆ. ತಿಂದು ತೇಗಿದೆ. ಇಪ್ಪತ್ತು ರೂಪಾಯಿ ಗೆದ್ದೆ...." ಎಂದು ಕತೆ ಮುಗಿಸುತ್ತಾರೆ. ಯಾರಾದರೂ ಇದು ಸಾಧ್ಯವೇ . .ಎಂದು ನಕ್ಕರೆ ತಾತ 'ಏಕದಂ' ರೇಗಿ 'ಈಗಲೂ ಹಾಕಿಸು ಒಂದು ಹೊರೆ ಹುಲ್ಲು, ಕಟ್ಟು ಒಂದು ನೂರು ರೂಪಾಯಿ ಪಂದ್ಯ' ಎಂದು ಹಾರಾಡುತ್ತಾರೆ. ಪಾಪ ಅವರ ಸ್ನೇಹಿ ತರು, 'ನಿಮಗೆ ಹುಲ್ಲು ತಿನ್ನಿಸೋ ಪಾಪಕ್ಕೆ ನಾವೇಕೆ ಹೋಗೋಣ, ನಮ್ಮಲ್ಲಿ ನೂರು ರೂಪಾಯಿಯೂ ಇಲ್ಲ' ಎಂದು ಮೆಲ್ಲನೆ ಪಾರಾಗುತ್ತಾರೆ.

ತಾತ ಹೇಳುವ ತಮ್ಮ ಪವಾಡಗಳಲ್ಲಿ ಇನ್ನೊಂದು ಇದೆ. (ತಾತನೇ ಹೇಳಿದರೆ) ಅದು ಇದ್ದಿದ್ದೂ ಸ್ವಾರಸ್ಯವಾಗಿರುತ್ತೆ :

"ನಾವೆಲ್ಲರೂ ಒಂದು ಸಾರಿ ಬಾಬಾಬುಡನ್‌ಗಿರಿಗೆ ಹೋಗಿದ್ದೆವು. ಅಲ್ಲಿ ಟ್ರಾವಲರ್ಸ್ ಬಂಗಲೆಯಲ್ಲಿ ಇಳಿದುಕೊಂಡಿದ್ದೆವು. (ಟ್ರಾವಲರ್ಸ್ ಬಂಗಲೆ ಬಾಬಾಬುಡನ್‌ಗಿರಿಯಲ್ಲಿರುವುದು ತಾತನಿಗೊಬ್ಬರಿಗೇ ಗೊತ್ತು!) ಎಲ್ಲರೂ ಬೆಟ್ಟಹತ್ತಿ ಇಳಿದು ಸುತ್ತಿ ಸುಳಿದು ದಣಿದು ಮಲಗಿದ್ದರು.

"ಅರ್ಧರಾತ್ರಿ ಇರಬಹುದು. ಏನೋ ನೆಲ ಕೆರದ ಹಾಗಾಯಿತು. ನಾನು ಯಾವುದೋ ಬೆಕ್ಕಿರಬೇಕೆಂದು ತುಂಬಾ ಹೊದ್ದುಕೊಂಡು ಬೇರೆ ಮಗ್ಗುಲಿಗೆ ತಿರುಗಿ ಗೊರಕೆ ಹೊಡೆಯತೊಡಗಿದೆ. ನನ್ನ ಪಕ್ಕದಲ್ಲಿ ವೆಂಕಣ್ಣಿ ಮಲಗಿದ್ದ. ಅವನ ಕಾಲು ನೆಕ್ಕಿದ ಹಾಗಾಯಿತಂತೆ. ಅವನು ಕಿರಚಿಕೊಂಡ. ಅಷ್ಟರಲ್ಲಿ ಆ ಅಪರಿಚಿತ ಪ್ರಾಣಿ ತನ್ನೆರಡು ಕಾಲುಗಳನ್ನು ವೆಂಕಣ್ಣಿಯ ಹೊಟ್ಟೆಯ ಮೇಲೆ ಇಟ್ಟು ಎದೆಯನ್ನು ಪರಚಿತಂತೆ.'ಅವನು 'ಹೋ' ಎಂದು ಕೂಗಿಕೊಂಡು ಎದ್ದ."

"ಅವನು ಕೂಗಿದ ಅಬ್ಬರಕ್ಕೆ ಎಲ್ಲರೂ ಎದ್ದು 'ಕಿರುಬ ಕಿರುಬ' ಎಂದು ಕೂಗಿಕೊಂಡು, ಕದ ಬಾಗಿಲೆನ್ನದೆ ಓಡಿದರು. ನಾನು ಮುಸುಕು ತೆಗೆದು ನೋಡುತ್ತೇನೆ. ಕಿರುಬ 'ದುರುಗುಟ್ಟಿಕೊಂಡು ನನ್ನ ಕಡೆ ನೋಡುತ್ತಿತ್ತು. ನಾಲ್ಕಡಿ ಉದ್ದ ಎರಡಡಿ ಎತ್ತರದ ಗರಡಿಯಾಳು ಕಾಲು-ಕೈಗಳ ಮೇಲೆ ನಿಂತಂತೆ, ನಿಂತಿತ್ತು. ಆಚೆ ನಿಂತಿದ್ದವರೆಲ್ಲ ನನ್ನನ್ನು ಕೂಗಿ 'ಬಾರಯ್ಯ ಓಡಿ ಬಾರಯ್ಯ' ಎಂದು ಕೂಗಿಕೊಳ್ಳುತ್ತಿದ್ದರು."

"ಥೂ ಹೋಗ್ರಯ್ಯಾ ಒಳ್ಳೆಯ 'ಸತಾಪಲು'ಗಳು ನೀವು ಎಂದು ಹೇಳಿ, ಆ ಕಿರುಬದ ಕಡೆ ನೋಡಿದೆ. ನಾನು ನೋಡಿದೇಟಿಗೆ ಅದು ಹೆದರಿತು. ಹೆದರಿದ ಅದರ ಕಣ್ಣುಗಳು ಗಾಜಿನ ಗೋಲಿಯಂತೆ ಹೊಳೆಯುತ್ತಿದ್ದುವು. ನಾನು ಕಾಲ ವಿಳಂಬಮಾಡದೆ, ಮೆಲ್ಲನೆ ನೆಲದಲ್ಲೇ ತೆವಳಿದೆ. ಮೂಲೆ ತಲುಪಿದೆ. ಮೂಲೆ ಯಲ್ಲಿ ನಿಲ್ಲಿಸಿದ್ದ ವಾಕಿಂಗ್ ಸ್ಟಿಕ್ (ಕಬ್ಬಿಣದ್ದು ಅರ್ಥಾತ್ ಹಳೆಯ ಕೊಡೆಯ ಹಿಡಿ ಕಡ್ಡಿ) ತೆಗೆದುಕೊಂಡೆ. ಸ್ವಲ್ಪಹೊತ್ತು ಅಲುಗಾಡದೆ ಮಲಗಿಕೊಂಡೆ. ಒಮ್ಮೆಲೆ ನೆಗೆದು ಆ ಕಿರುಬನ ಗಂಟಲಿಗೆ ವಾಕಿಂಗ್ ಸ್ಟಿಕ್‌ನ್ನು ಜೋರಾಗಿ ನನ್ನ ಬಲವನ್ನೆಲ್ಲಾ ಬಿಟ್ಟು ತಿವಿದೆ. ಆ ಕೋಲು 'ಅನಾಮತ್ತು' ಅದರ ಬಾಯೊಳಗೆ ಹೋಗಿ ಅದರ ತುದಿ ಕಿರುಬನ ಜಠರ ರಸವನ್ನು ಕಲಕಿ ಗುಲ್ಮ ವನ್ನು ಗಡೀಪಾರು ಮಾಡಿತು. ವಾಕಿಂಗ್ ಸ್ಟಿಕ್ಕಿನ ಹಿಡಿ ಮಾತ್ರ, ಗೋಡೆಗಳ ಮೇಲಿರುವ ಕೊಕ್ಕೆಯಂತೆ ಈಚೆ ಉಳಿಯಿತು. ಆ ಹಿಡಿಯನ್ನು ಹಿಡಿದು

ನಾನು ಅದಕ್ಕೆ ಹಿಂಗಣ್ಣು ಹೊಡೆಸಿದೆ. ಕಿರುಬ ಅಂಗತ್ತನಾಗಿ ಬಿದ್ದಿತು. ಕ್ಷಣಾರ್ಧದಲ್ಲಿ ತಲೆದಿಂಬಿನ ಕೆಳಗಿದ್ದ ಹಾಸಿಗೆ ಕಟ್ಟುವ ಹಗ್ಗವನ್ನು ತೆಗೆದು ಕೊಂಡು ಕಿರುಬನ ಕೈಕಾಲುಗಳನ್ನು ಅದರ ಹೊಟ್ಟೆಗೆ ಸೇರಿಸಿ ಬಿಗಿದೆ. ಅದು ಸುಸ್ತಾಗಿ ಸುಮ್ಮನೆ ಮಲಗಿತು. 'ಬನ್ನಿರಯ್ಯ ಅದರ ಕೆಲಸ ಮುಗಿಯಿತು' ಎಂದು ಆಚೆಯಿದ್ದ ಅತಿರಥ ಮಹಾರಥನ್ನು ಬರಹೇಳಿದೆ. ಅವರೆಲ್ಲ ಕಣ್ಣುಬಿಟ್ಟು ಆ ಕಿರುಬನನ್ನೇ ನೋಡಿ ನನ್ನ ಬೆನ್ನುತಟ್ಟಿ 'ಭೇಷ್' ಅಂದರು. ಆಗಲೇ ಈ ಕಿರುಬನನ್ನು ಹೊಡೆಯಬೇಕೆಂದು ಪರಿವಾರ ಸಮೇತನಾಗಿ ಬೇಟೆಗೆ ಬಂದಿದ್ದ ಯೂರೋಪಿಯನ್ ದೊರೆಯೊಬ್ಬ ನನಗೊಂದು ಮೆಡಲ್ ಕೊಟ್ಟ. ತನ್ನ ಗುಡಾರಕ್ಕೆ ಕರೆದುಕೊಂಡು ಹೋಗಿ ಹಣ್ಣು, ಹಾಲು ಕೊಟ್ಟ. ಬಹಳ ದಿನಗಳವರೆಗೂ ಈ ಮೆಡಲ್ ನನ್ನ ಹತ್ತಿರವೇ ಇತ್ತು. ನನ್ನ ಮೊದಲ ನೆಯ ಮೊಮ್ಮಗ ಮೂರು ವರ್ಷದವನಾಗಿದ್ದಾಗ ಅವರಮ್ಮ ಅವನನ್ನು ನನ್ನ ಹತ್ತಿರ ಬಿಟ್ಟು ಪೇಟೆಗೆ ಹೋಗಿದ್ದಳು. ಅವನು ಅಳತೊಡಗಿದ....ಅವನನ್ನು ಸುಮ್ಮನಿರಿಸುವ ಸಲುವಾಗಿ ಅವನ ಕೈಗೆ ಅದನ್ನು ಆಡಲು ಕೊಟ್ಟೆ. ಆ ಮೇಲೆ ಮರೆತುಬಿಟ್ಟೆ..ಅವನು ಕಳದೇ ಬಿಟ್ಟ..ಎಂಥ ಮೆಡಲು ಅಂತೀರಿ..ಅಂಥ. ಮೆಡಲನ್ನು ನಾನು ತಿರುಗಿ ಎಲ್ಲೂ ನೋಡಲೇ ಇಲ್ಲ. ಕೋಟಿನ ಕಾಲರಿಗೆ ಹಾಕಿಕೊಂಡರೆ ಕಾಲರ್ ಜಗ್ಗಿ ಬೀಳುತ್ತಿತ್ತು. ಸೊಂಟಕ್ಕೆ ಸಿಕ್ಕಿಸಿಕೊಂಡರೆ ಅದರ ಭಾರಕ್ಕೆ ಸೊಂಟದ ಪಟ್ಟಿಯೇ ಡೊಂಕಾಗುತ್ತಿತ್ತು. ಅಂಥ ತೂಕದ ಮೆಡಲನ್ನು ಯಾರು ಮಾಡಿಸುತ್ತಾರೆ ಈಗಿನ ಕಾಲದಲ್ಲಿ."—ಎಂದು ತಾತ ಕತೆ ಮುಗಿಸುತ್ತಾರೆ.

ಒಮ್ಮೆ ಈ ಕತೆ ಹೇಳಿ ಮುಗಿಸಿ ತಾತ ಇನ್ನೂ ಏನೇನೋ ಹೇಳಬೇಕೆಂ ದಿದ್ದರು. ಅಷ್ಟರಲ್ಲಿ ಹೇಳಿ ಕಳುಹಿಸಿದಂತೆ ಒಂದು ಜಿರಲೆ ಅವರ ತೊಡೆಯ ಮೇಲೆ ಹತ್ತಿ ಅವರ ಅಂಗಿಯೊಳಕ್ಕೆ ನುಸುಳಿತು. ತಾತ 'ಹೋ' ಎಂದು ಕಿರುಚಿ ಅಂಗೀ ಪಂಚೆಯನ್ನೆಲ್ಲಾ ಕಿತ್ತು ಬಿಸುಟು ಕೋಣೆಯ ತುಂಬ ಕುಣಿದು 'ಯಾರಾದರೂ ಜಿರಲೆಯನ್ನು ಹೊಡೆದು ಆಚೆ ಹಾಕಿ' ಎಂದು ಕೂಗಿದರು.

ಅಲ್ಲಿಯೇ ಆಡುತ್ತಿದ್ದ ಐದು ವರ್ಷದ ನನ್ನ ತಮ್ಮ ಆ ಜಿರಲೆಯನ್ನು ಮೀಸೆ ಹಿಡಿದುಕೊಂಡು ಹೊರಗೆ ಹಾಕಿಬಂದು:

'ಏನು ತಾತ ಕಿರುಬನನ್ನು ಕೊಡೆ ಕಡ್ಡಿಯಿಂದಲೇ ಹೊಡೆದೆ ಎಂದು ಈಗ ತಾನೇ ಹೇಳಿದೆ. ಒಂದು ಜಿರಲೆ ಬಂದ್ರೆ ಹಾರಾಡಿದೆ' ಎಂದ. ತಾತ ಅವನ ಮಾತನ್ನು ಗಮನಿಸದಂತೆ ನಟಿಸಿ ಪಾರಾದರು. ಆದರೆ ಆ ಹುಡುಗ ಅಷ್ಟಕ್ಕೆ ಬಿಡಲಿಲ್ಲ ಅವರ ತೊಡೆ ಹತ್ತಿ ಕುಳಿತು ಜಿರಲೆಯ ಮೀಸೆ ಹಿಡಿದಂತೆ ತಾತನ ಮೀಸೆ ಹಿಡಿದೆಳೆದ. ತಾತನ ಮೀಸೆ ಕೈಗೆ ಬಂತು. ತಾತನಿಗೆ ರೇಗಿಹೋಗಿತು. ಅದು ವರೆಗೂ ತಾತನದು ಕೃತಕ-ಮೀಸೆ ಎಂಬುದು ಯಾರಿಗೂ ಗೊತ್ತಾಗಿರಲಿಲ್ಲ. ಎಲ್ಲರೂ ನಕ್ಕರು. ತಾತ ನನ್ನ ತಮ್ಮನ ಮೇಲೆ ರೇಗಿಬಿದ್ದರು.

ತಾತ ದೆವ್ವದ ಕತೆ ಹೇಳುವುದು ಜಾಸ್ತಿ. ದೆವ್ವಗಳನ್ನು ಕಂಡರೆ ಹೆದರಿಕೊಳ್ಳುವವರಿಗೆ ಅವುಗಳನ್ನು ಪದೇ ಪದೇ ಹೇಳುತ್ತಿರುತ್ತಾರೆ. ಅವರು ಹೇಳುವ ಕತೆಗಳಲ್ಲಿ ಅವರ ಹದಿನೆಂಟನೆಯ ವರ್ಷದಲ್ಲಿ ನಡೆದ ಕತೆಯಿದು.

"ನನ್ನ ಹದಿನೆಂಟನೆಯ ವರ್ಷದಲ್ಲಿ ಒಂದು ದೆವ್ವವನ್ನು ಹೇಗೊ ಸ್ವಾಧೀನಪಡಿಸಿಕೊಂಡಿದ್ದೆ! ಹೀಗೆ, ಒಂದು ದಿನ ನಮ್ಮೂರಿನ ಸಮೀಪದ ಹಳ್ಳಿಗೆ 'ಬಾಕಿ' ವಸೂಲಿಗೆ ಹೋಗಿದ್ದೆ. ಅಲ್ಲಿಂದ ವಾಪಸು ಹೊರಡುವುದು ಕೊಂಚ ತಡವಾಗಿ ಕತ್ತಲಾಗಿತ್ತು. ಬೇಗಬೇಗನೆ ಹೆಜ್ಜೆಯಾಕುತ್ತ, ನಿಧಾನಕ್ಕೆ ಕಾರಣರಾದವರ ಜನ್ಮ ತೊಳೆಯುತ್ತ ಬರುತ್ತಿದ್ದೆ. ದೂರದಲ್ಲಿ ಮರದ ಮೇಲೆ ಯಾರೋ ಕುಳಿತಿದ್ದಂತೆ ಕಾಣಿಸಿತು. ಕತ್ತಲಲ್ಲಿ ಯಾರು ಅನ್ನುವುದು ಸರಿಯಾಗಿ ಕಾಣಲಿಲ್ಲ. 'ಯಾರು?' ಎಂದು ಕೂಗಿದೆ. ಉತ್ತರ ಬರಲಿಲ್ಲ. ಸುಮ್ಮನಾದೆ. ಆದರೆ ಮರುಕ್ಷಣದಲ್ಲೇ ಅಲ್ಲಿ ಕುಳಿತವರು ಅದೃಶ್ಯರಾದರು. ನನಗೆ ಆಶ್ಚರ್ಯವಾಯಿತು. ಸುತ್ತಮುತ್ತ ನೋಡಿದೆ. 'ನೀನೇ' ಎಂಬುವವರಿರಲಿಲ್ಲ. ನನ್ನ ಹಿಂದೆ ಯಾರೋ ಬರುತ್ತಿರುವಂತೆ ತೋರಿತು. ಹಿಂತಿರುಗಿ ನೋಡಿದೆ. ಯಾರೂ ಇರಲಿಲ್ಲ. ಸರಿ .ಇದು ದೆವ್ವವೇ ಇರಬೇಕೆಂದು ನಿರ್ಧರಿಸಿದೆ. ಇದಕ್ಕೆ ಹೆದರಿ ಪ್ರಯೋಜನವಿಲ್ಲವೆಂದು ಅದನ್ನು ಕುರಿತು, 'ಹಿಂದೇಕೆ ಬರ್ತಿ. ಮುಂದಕ್ಕೆ ಬಾ, ಹೇಡಿ ದೆವ್ವಾ,' ಎಂದೆ.

ಅದು ಉತ್ತರಿಸಲಿಲ್ಲ. ಬದಲು ಹೆಣ್ಣುರೂಪ ತಾಳಿ ಕಿಲಕಿಲ ನಕ್ಕಿತು. ನಾನು ಕೊಂಚ ಭಯಪಟ್ಟೆನಾದರೂ ಅದನ್ನು ಹೊರಗೆ ತೋರಗೊಡಲಿಲ್ಲ. ಅದರ ಹತ್ತಿರಕ್ಕೆ ಹೋದೆ. ಅದರ ಜುಟ್ಟು ಹಿಡಿದುಕೊಂಡೆ, 'ಜಪ್' ಎಂದು ಅದು ಅದೃಶ್ಯವಾಯಿತು. ಆದರೆ ಅದರ ನೆತ್ತಿಯಲ್ಲಿನ ಒಂದು ಕೂದಲು ನನ್ನ

ಕೈಲೇ ಉಳಿಯಿತು. ಅದನ್ನು ಭದ್ರಪಡಿಸಿಕೊಂಡೆ. ಅಂದರೆ, ಆ ದೆವ್ವ ನನ್ನ ಸ್ವಾಧೀನಕ್ಕೆ ಬಂದಂತಾಯಿತು. ನಾನು ಹೇಳಿದಂತೆ ಕೇಳತೊಡಗಿತು. ಮನೆಗೆ ಬಂದೊಡನೆ ಅದನ್ನು ಭರಣಿಯಲ್ಲಿ ಭದ್ರಪಡಿಸಿದೆ. ಆ ದೆವ್ವ ದಿನ ರಾತ್ರಿಯಾದಮೇಲೆ ನನ್ನ ಬಳಿ ಬಂದು 'ನನ್ನ. ಕೂದಲು ಕೊಡು ನಾನು ಹೋಗ್ತೇನೆ' ಎಂದು ಬೇಡುತ್ತಿತು. ನಾನು 'ಇರಲಿ ಇರಲಿ' ಎಂದುಕೊಂಡೇ ಬರುತ್ತಿದ್ದೆ."

"ಆದರೆ ಒಂದು ದಿನ ನನ್ನ ಸೊಸೆ ನಾನಿಲ್ಲದಾಗ ಮನೆ ಧೂಳು ಕೊಡವುತಿದ್ದಾಗ ಈ ಭರಣಿಯಲ್ಲಿ ಏನೊ 'ಜುರ್' ಎಂದು ಸದ್ದಾಗಿ ಹೊಗೆ ಬಂದಂತಾಯಿತಂತೆ. ಆಕೆಗೆ ಹೆದರಿಕೆಯಾಗಿ ಅದರ ಬಾಯಿ ತೆಗೆದು ಕೊಡವಿಬಿಟ್ಟಳಂತೆ. ಕೂದಲು ಎಲ್ಲೋ ಬಿದ್ದುಹೋಯಿತು ...ಇಲ್ಲದಿದ್ದರೆ ಆ ದೆವ್ವ ಇದುವರೆಗೂ ನನ್ನ ದಾಸಾನು ದಾಸನಾಗಿ ಬಿದ್ದಿರುತ್ತಿತ್ತು. ಈಗಿನ ಕಾಲದವರಿಗೆ ಇದನ್ನೆಲ್ಲಾ ಹೇಳಿದರೆ ನಗ್ತಾರೆ. ಹೋಗಲಿ ಒಂದು ದೆವ್ವ ನೋಡಿದ್ದಾರೊ ಈಗಿನ ಕಾಲದವರು ಕೇಳಿ" ಎನ್ನುತ್ತಾರೆ.

ತಾತನ ಮಾತನ್ನು ನೆಚ್ಚಿಕೊಂಡು ನಮ್ಮ ಆರು ವರ್ಷದ ಅರವಿಂದ ಒಂದು ದಿನ ತನಗೆ ಉಪ್ಪಿಟ್ಟಿನಲ್ಲಿ ಸಿಕ್ಕ ಕೂದಲನ್ನು ತಾತನಿಗೆ ತಂದುಕೊಟ್ಟು 'ಇಗೋ ತಾತ ಆವತ್ತು ದೆವ್ವದ ಕೂದಲು ಕಳೆದುಹೋಯಿತು ಅಂದೆಯೆಲ್ಲಾ ಅದು ಸಿಕ್ಕಿದೆ' ಎಂದ. ಆ ದಿನ ತಿಂಡಿ ಮಾಡಿದ ನಮ್ಮ ಚಿಕ್ಕಮ್ಮ ಅವನನ್ನು ಚೀಮಾರಿ ಹಾಕಿ ಉಳಿದವರ ಮೇಲೆಲ್ಲ ಉರಿದುಬಿದ್ದರು.

ಕನ್ನಡ ಪ್ರತಿಕಾರಂಗದಲ್ಲಿ ದಿಟ್ಟತನದ ಹೊಸ ಹೆಜ್ಜೆ

# ಸಾಹಿತ್ಯ ಪ್ರಗತಿ

**ಸಂಪಾದಕರು: ಆರ್. ಬಸವರಾಜ್ ಬಿ.ಎಸ್‌ಸಿ. (ಆನರ್ಸ್)**

ಕನ್ನಡ ಸಾಹಿತ್ಯದ ಮತ್ತು ಪ್ರಕಟನ ಪ್ರಪಂಚದ ಪ್ರಗತಿಗಾಗಿ
ಮೀಸಲಾದ ಹೊಸ ರೀತಿಯ ಮಾಸಪತ್ರಿಕೆ

ಪ್ರಕಾಶಕರು, ಪುಸ್ತಕ ವ್ಯಾಪಾರಿಗಳು, ಲೇಖಕರು, ವಾಚನಾಲಯಗಳು,
ಪುಸ್ತಕ ಭಂಡಾರಗಳು ಹಾಗೂ ಎಲ್ಲ ರೀತಿಯ ಓದುಗರಿಗೂ
ಉಪಯುಕ್ತವಾದ ಮಾಸಿಕ

ಡೆಮ್ಮಿ ಅಷ್ಟದಳಾಕಾರದ ೩೬ ಪುಟಗಳು ಬಿಡಿ ಸಂಚಿಕೆ: ಮೂರಾಣೆ

**ವಾರ್ಷಿಕ ಚಂದಾ: ಎರಡು ರೂಪಾಯಿ ಎಂಟಾಣೆ ಮಾತ್ರ**
**(ಅಂಚೆ ವೆಚ್ಚ ಸೇರಿ)**

**ಸಾಹಿತ್ಯ ಪ್ರಗತಿಯ ವೈಶಿಷ್ಟ್ಯಗಳು**

★ ಪ್ರತಿ ತಿಂಗಳೂ ಹೊರಬೀಳುವ ಕನ್ನಡ ಪುಸ್ತಕಗಳ ಸಂಪೂರ್ಣ ಸುದ್ದಿ ಸಂಗ್ರಹ

★ **ಸ್ಥಿರ ಶೀರ್ಷಿಕೆಗಳು**
ಶ್ರೀ ಬಸವರಾಜ ಕಟ್ಟೀಮನಿಯವರ 'ಮಾನಸ ಸರೋವರ'
ಶ್ರೀ 'ತ.ರಾ.ಸು.'ರವರ 'ವಿಹಂಗಮ ವಿಹಾರ'
ಶ್ರೀ 'ಜಿಬಿಜ್'ರವರ 'ವ್ಯರ್ಥಾಲಾಪ'

★ ವಿಸ್ತೃತ ಪುಸ್ತಕ ವಿಮರ್ಶೆಗಳು, ಹೆಸರಾಂತ ಕತೆಗಾರರ ಸಣ್ಣ ಕತೆಗಳು, ಸಂಗ್ರಹಿತ ಕಾದಂಬರಿ, ನಾನೆಂದೂ ಮರೆಯಲಾಗದ ವ್ಯಕ್ತಿ, ಬೆಳಕಿಗೆ ಬರುತ್ತಿರುವ ಲೇಖಕರ ಪರಿಚಯ.

★ ಪತ್ರಿಕಾಭಿಪ್ರಾಯಗಳು ★ ವಾಚಕರ ವಿಭಾಗಗಳು–
'ನೀವು ಕೇಳಿದ್ದು' ಮತ್ತು 'ನಿಮ್ಮ ಓಲೆಗಳು' ಇತ್ಯಾದಿ

**ನೀವಿನ್ನೂ ಚಂದಾದಾರರಾಗದಿದ್ದಲ್ಲಿ ಇಂದೇ ಚಂದಾದಾರರಾಗಿರಿ**

ಪ್ರಕಾಶಕರು:

**ಶಾರದಾ ಪ್ರಕಟನಾಲಯ**

ಅರಳೇಪೇಟೆ, ಬೆಂಗಳೂರು–೨

## ಶಾರದಾ ಸಾಹಿತ್ಯಮಾಲೆಯ [illegible]

| | | ಬೆಲೆ ರೂ. | ಆ. | ಪೈ. |
|---|---|---|---|---|
| ೧. | ಕಾರವಾನ್ (ದ್ವಿತೀಯ ಮುದ್ರಣ) | ೧ | ೪ | ೦ |
| ೨-೩. | ಸ್ವಾತಂತ್ರ್ಯದೆಡೆಗೆ (ದ್ವಿತೀಯ ಮುದ್ರಣ) | ೨ | ೪ | ೦ |
| ೪. | ಜೀವನಕಲೆ * | ೧ | ೦ | ೦ |
| ೫. | ಮುಗುಳುನಗೆ * | ೧ | ೪ | ೦ |
| ೬. | ಸ್ವಪ್ನಸುಂದರಿ (ದ್ವಿತೀಯ ಮುದ್ರಣ) | ೧ | ೪ | ೦ |
| ೭-೮. | ಆಲದ ಹೂ | ೧ | ೧೨ | ೦ |
| ೯. | ಹುಡುಗಾಟ | ೧ | ೪ | ೦ |
| ೧೦. | ಶವದ ಮನೆ | ೧ | ೪ | ೦ |
| ೧೧. | ಎದಿರೇಟು | ೧ | ೮ | ೦ |
| ೧೨-೧೩. | ಸರ್ವಮಂಗಳ * | ೪ | ೮ | ೦ |
| ೧೪. | ಕೇಡಿಗನ ಕಿಡಿಗಳು | ೧ | ೦ | ೦ |
| ೧೫. | ದೇವತೆಗಳು ನಕ್ಕಾಗ | ೧ | ೪ | ೦ |
| ೧೬-೧೭. | ಜ್ವಾಲಾಮುಖಿಯ ಮೇಲೆ | ೪ | ೦ | ೦ |
| ೧೮. | ನನ್ನ ರಸಿಕ ಮತ್ತು ಬಂಗಾರದ ಗೆಜ್ಜೆ | ೧ | ೮ | ೦ |
| ೧೯. | ಹಾಳು-ಮೂಳು | ೧ | ೦ | ೦ |
| ೨೦-೨೧-೨೨. | ಮೋಹದ ಬಲೆಯಲ್ಲಿ | ೫ | ೧೨ | ೦ |
| ೨೩. | ಸಾವಿನೊಂದಿಗೆ ಸರಸ | ೧ | ೪ | ೦ |
| ೨೪. | ಅನುರಾಗ | ೧ | ೪ | ೦ |
| ೨೫. | ಜೋಳದ ಬೆಳೆಯ ನಡುವೆ | ೧ | ೪ | ೦ |
| ೨೬-೨೭. | ಬಿಡುಗಡೆಯ ಬೇಡಿ | ೩ | ೪ | ೦ |
| ೨೮-೨೯. | ಜರತಾರಿ. ಜಗದ್ಗುರು | ೩ | ೧೨ | ೦ |
| ೩೦. | ಕಾನ್ವೆಂಟ್ ಗರ್ಲ್ | ೧ | ೦ | ೦ |
| ೩೧. | ಖಾನಾವಳಿಯ ನೀಲಾ | ೧ | ೦ | ೦ |
| ೩೨. | ರಂಗನಾಯಕಿ | ೨ | ೦ | ೦ |
| ೩೩. | ಮದುವೆ ಮಾಡಿ ನೋಡು | ೧ | ೦ | ೦ |
| ೩೪-೩೫. | ಕಲ್ಯಾಣಿ | ೨ | ೮ | ೦ |

### ಬಿಡಿ ಪ್ರಕಟನೆಗಳು

| | | | | |
|---|---|---|---|---|
| ೧. | ನಾಡಿಗೇರರ ನಗೆಬರಹಗಳು ೧ | ೧ | ೪ | ೦ |
| ೨. | ನನ್ನ ದೇವರು (ಕುವೆಂಪು) | ೧ | ೪ | ೦ |

* ಪ್ರತಿಗಳು ಮುಗಿದಿವೆ.